Photo by N. Ramakrishna



ಬಹುಮಾನ
ಪಡೆದ ಶೀರ್ಷಿಕೆ

ಪಸುಳೆಗಳು

ಕಳಿಸಿದವರು:
ಪಿ. ಕೆ. ರಮಾನಂದ, ಉಡುಪಿ

## ಈ ಸಂಚಿಕೆಯಲ್ಲಿ



ಸಂಪುಟ ೧೦
ಸಂಚಿಕೆ ೧

ಜನವರಿ
೧೯೫೮

# ಚಂದಮಾಮ

ಹೊಸವರ್ಷ ಬಂತೆನ್ನುವಾಗ ಕಳೆದ ಜನವರಿ ನೆನಪಿಗೆ ಬರುತ್ತದೆ. ಅಂದೂ ನಿಮಗೊಂದು ಸಂತೋಷವಾರ್ತೆ ತಿಳಿಸಿದ್ದೆವು. ಅಂದು ತನ್ನ ಸ್ವಂತವಾದ ವಿಶಾಲ ಭವನದೊಳಗೆ ಪ್ರವೇಶ ಮಾಡಿದ ಚಂದಮಾಮನು, ಇಂದೂ ಇನ್ನೊಂದು ಉತ್ಸಾಹದ ವಾರ್ತೆಯನ್ನು ತಿಳಿಸುತ್ತಾನೆ. ಕಳೆದ ವರ್ಷ ಪ್ರವೇಶಮಾಡಿದ ಈ ಹೊಸ ಮಂದಿರವು ಈಗ ಇನ್ನೂ ವಿಸ್ತಾರವಾಗಿದೆ. ಈ ಹೊಸ ಚಂದಮಾಮನ ಆವರಣದಲ್ಲಿ ಬ್ಲಾಕುಗಳನ್ನು ತಯಾರಿಸುವ ಪ್ರಾಸೆಸಿಂಗ್ ಶಾಖೆ ಕೂಡಾ ಸುಸ್ಥಿರವಾಗಿ ಏರ್ಪಾಡಾಗಿದೆ. ಅಂದರೆ ಈ ಜನವರಿಯಿಂದ ಚಂದಮಾಮ ಪ್ರಕಾಶನಗಳೆಲ್ಲಾ ಸ್ವಂತ ಕಾರ್ಯಾಲಯದಲ್ಲಿ ತಯಾರಿಸಿದ ಬ್ಲಾಕುಗಳಿಂದಲೇ ಮುದ್ರಿಸಲ್ಪಡುತ್ತವೆ. ಇಂತಹ ಸುಲಭ ಸೌಕರ್ಯಗಳನ್ನೊಳಗೊಂಡ ಚಂದಮಾಮನು, ಇನ್ನುಮುಂದೆ ನಿಮಗೆಲ್ಲಾ ಪ್ರಿಯವಾದ ಅಲಂಕಾರದೊಂದಿಗೆ ಬೆಳಗಲಿರುವನೆಂಬುದೇ ನಮ್ಮ ಹೊಸ ವರ್ಷದ ಸಂದೇಶವಾಗಿದೆ.




# ಬೆಕ್ಕಿನ ಮರಿಗಳ ಹೋರಾಟ



ಬಾರಿ ಗಾಳಿ ಬೀಸುತಿತ್ತು
ಜೋರು ಮಳೆ ಬರುತಿತ್ತು
ದೊಡ್ಡ ತುಫಾನ್ ಬೊಬ್ಬೆಯಿಂದ
ಪ್ರಪಂಚವೇ ನಡುಗುತಿತ್ತು.

ಮರಗಳೆಲ್ಲ ರೊಂಯ್ಯ ರೊಂಯ್ಯ
ಉಯ್ಯಲೆಯೋಲಾಡಿದುವು.
ಪ್ರಾಣಿಗಳೆಲ್ಲಾ ಹೆದರಿ
ಒಳಗೊಳಗೇ ಅಡಗಿದುವು.

ಆಗ ಒಂದು ಮನೆಯ ಒಳಗೆ
ಎರಡು ಬೆಕ್ಕಿನ ಮರಿಗಳಿಗೆ
ಪುಟ್ಟದೊಂದು ಇಲಿಯಿಂದ
ಬಂತು ಜಗಳ ಅವುಗಳಿಗೆ

ಬೆಕ್ಕಿನ ಮರಿಯೊಂದಕೆ, ಆ
ಸಣ್ಣಿಲಿ ದೊರಕಿತ್ತು, ನೋಡಿ
ಓಡಿಬಂದಿನ್ನೊಂದು ಬೆಕ್ಕು
ತನ್ನದಿದೆಂದಿತು ಕಾಡಿ.

ಇದು ನನ್ನಿಲಿ ನಾನು ಹಿಡಿದೆ
ಎಂದಿತೊಂದು, ನನಗೂನೂ
ಇದರ ಮೇಲೆ ಹಕ್ಕುಂಟೆಂ
ದಿನ್ನೊಂದಿಂತೆರಡೂನೂ,

ನಂದು–ನಂದು–ನಂದು ಎಂದು
ಜೋರು ಜಗಳ ಮಾಡಿದುವು!
ಕೂಗಿ, ಸುಮಿದು, ಕಡಿದು, ಪರಚಿ,
ವಾದಾಡುತ ಸಾಗಿದುವು.

ನಿನ್ನ ಚರ್ಮ ಹರಿವೆನೆಂದು
ನಿನ್ನ ಹೊಟ್ಟೆ ಸೀಳ್ವೆನೆಂದು,
ನಿನ್ನನಪ್ಪಳಿಸುವೆನೆಂದು
ನಿನ್ನ ಕಚ್ಚಿ ಕೊಲ್ವೆನೆಂದು,

ಮ್ಯಾಂ ಮ್ಯಾಂ ಗುರ್ ಗುರ್ರೆನ್ನುತ
ಕರ್ಕಶದಲಿ ಕಿರುಚಿದುವು.
ಮನೆಮಾಡೇ ಎಗುರುವಂತೆ,
ಬಲು ಗಲಾಟೆ ಮಾಡಿದುವು.

ಈ ಸಂಧಿಲಿ ಬಿದ್ದಿದ್ದಿಲಿ,
ಮೆಲ್ಲ ತೆವಳಿ ಓಡಿಹೋಯ್ತು!
ಬೆಕ್ಕುಗಳ ಗಲಾಟೆ ಕೇಳಿ,
ಮನೆಯಾಕೆಗೆ ಸಿಟ್ಟುಬಂತು.

ಅವಳು ಓಡಿ ಬಂದು ಎರಡು
ಬೆಕ್ಕುಗಳನು ಕಿವಿಯ ಹಿಡಿದು
ಕಿಟಕಿಯಿಂದ ಹೊರಗೆ ಎಸೆದು
ನಡೆದಳೊಳಗೆ, ಕದವ ಜಡಿದು.

ಭಾರಿ ಗಾಳಿ ಬೀಸುತಿತ್ತು
ಜೋರು ಮಳೇ ಬರುತಿತ್ತು.
ಗಾಳಿ ಮಳೆಗೆ ನೆನೆದು ನೆನೆದು
ಚಳಿಯಲ್ಲಿ ನಡುಗಿ ನಡುಗಿ,

ಬೆಳಗಾಗಲು ಕೊನಯುಸಿರಲಿ,
ಬೆಕ್ಕುಗಳೊಳ ಬಂದುವು.
ಅಂದಿನಿಂದ ಬುದ್ಧಿ ಕಲಿತು
ಸ್ನೇಹದಿ ನಡೆಕೊಂಡುವು.





# ಅಣ್ಣನ ತಂತ್ರ



ರಾಮಸಿಂಗನು ಸಾಯುವಾಗ ತನ್ನ ಇಬ್ಬರು ಮಕ್ಕಳನ್ನು ಕರೆದು ತುಂಬಾ ಬುದ್ಧಿ ಹೇಳಿದನು. ಹಿರಿಯ ಮಗನಾದ ಭೂಪಾಸಿಂಗನನ್ನು ಕುರಿತು, ತಮ್ಮನಾದ ಭೋಟಾಸಿಂಗನನ್ನು ಪ್ರೀತಿಯಿಂದ ಕಾಪಾಡಬೇಕೆಂದು ಪ್ರತ್ಯೇಕವಾಗಿ ಹೇಳಿ ಪ್ರಾಣಬಿಟ್ಟನು.

ಭೂಪಾಸಿಂಗನು ತಂದೆಯ ಮಾತಿಗೆ ವಿರೋಧವಾಗಿ ತಮ್ಮನನ್ನು ದ್ವೇಷಿಸುತ್ತಲೇ ಇದ್ದನು. ಅವನಿಗೆ ವಿದ್ಯೆಯನ್ನೂ ಕಲಿಸದೆ, ವಸ್ತ್ರಾಹಾರಗಳನ್ನೂ ಸರಿಯಾಗಿ ಕೊಡದೆ, ತುಂಬಾ ಹಿಂಸಿಸುತ್ತಿದ್ದನು. ಆದ್ದರಿಂದ ಭೋಟಾಸಿಂಗನು ಮೊಂಡನೂ, ತುಂಟನೂ, ಬಂಡನೂ ಆಗುತ್ತ ಬಂದನು. ದೊಡ್ಡವನಾದಂತೆ ಅವನ ದೇಹವು ಒಳ್ಳೆ ಗಟ್ಟಿಮುಟ್ಟಾದ ಜಟ್ಟಿಯಂತಾಯಿತು. ಇವನನ್ನು ಹೀಗೆಯೇ ಬಿಟ್ಟರೆ ಬಲವಂತದಿಂದ ಪಾಲು ಕೇಳುತ್ತಾನೆಂದು ಭಾವಿಸಿ, ಭೂಪಾಸಿಂಗನು ಅವನನ್ನು ನಾಶಮಾಡಲು ಉಪಾಯವನ್ನು ಹುಡುಕುತ್ತಿದ್ದನು.

ಆ ಊರಿಗೆ ಒಬ್ಬ ಜಗಜಟ್ಟಿ ದಿಗ್ವಿಜಯಕ್ಕಾಗಿ ಬಂದಿದ್ದ. ಭೂಪಾಸಿಂಗನು ಅವನನ್ನು ನೋಡಿ, "ನನ್ನ ತಮ್ಮ ಭೋಟಾಸಿಂಗ್ ನಿನ್ನೊಡನೆ ಜಗಳವಾಡಲು ಬಯಸುತ್ತಾನೆ" ಎಂದನು. ಅನಂತರ ಭೋಟಾಸಿಂಗನ್ನು ನೋಡಿ ಆ ಜಗಜಟ್ಟಿ, "ನನ್ನೊಡನೆ ಜಗಳಮಾಡಲು ನೀನು ತೀರ ಸಣ್ಣವ. ಜಗಳದಲ್ಲಿ ಆವೇಶಗೊಂಡು ನಾನು ನಿನ್ನನ್ನು ಕೊಂದರೂ ಕೊಂದೇನು" ಎಂದನು. ಅದಕ್ಕೆ ಭೋಟಾಸಿಂಗ್—"ಗೆದ್ದರೆ ಕೀರ್ತಿ, ಸತ್ತರೆ ಸ್ವರ್ಗ; ಇದ್ದರೆ ನಿತ್ಯಾ ನರಕವಾಸತಾನೇ" ಎಂದನು.

ಜಟ್ಟಿಕಾಳಗವು ಪ್ರಾರಂಭವಾಯಿತು. ಆ ಜಗಜಟ್ಟಿಯೇ ಸೋತನು. ಭೋಟಾಸಿಂಗನೇ ಗೆದ್ದನು. ಸೋತು ಅಡಿಗೆಬಿದ್ದ ಜಗಜಟ್ಟಿ ಮತ್ತೆ ಎದ್ದು ಭೋಟಾಸಿಂಗನನ್ನು ಆಲಿಂಗಿಸಿ—"ಭೋಟಾಬಾಯಿ! ಇಂದಿನಿಂದ ನಾನೂ ನೀನೂ ಒಂದಾಗಿರೋಣ" ಎಂದನು.

ಎಲ್ಲರಿಗೂ ಆಶ್ಚರ್ಯ! ತಾನು ಗೆದ್ದುದಕ್ಕಾಗಿ ಭೋಟಾಸಿಂಗನಿಗೂ ಆಶ್ಚರ್ಯವೇ. "ನನಗೆ ಜಟ್ಟಿಯ ಪಟ್ಟುಗಳು ಕೂಡ ಗೊತ್ತಿರಲಿಲ್ಲವಲ್ಲಾ! ಮತ್ತೆ ನೀವು ಹೋಗೆ ಸೋತಿರಿ?" ಎಂದು ಅವನು ಆ ಜಗಜಟ್ಟಿಯನ್ನು ಕುರಿತು ಕೇಳಿದನು. ಅದಕ್ಕೆ ಜಟ್ಟಿ—"ನೀನು ಮೊದಲು ಹೇಳಿದ ಮಾತು ಕೇಳಿಯೇ ಸಂದೇಹವಾಯಿತು. ನಂತರ ಕಾಳಗದ ಹಿಡಿತವನ್ನರಿಯದೆ ನೀನು ನನ್ನೊಡನೆ ಕಾದುವಾಗ, ಇದು ನಿನ್ನ ಅಣ್ಣನ ತಂತ್ರವೆಂದು ನನಗೆ ತಿಳಿದು ಹೋಯಿತು. ಮುಂದೆ ಒಳ್ಳೆ ಕೀರ್ತಿಶಾಲಿಯಾಗುವ ಯೋಗ್ಯತೆ ನಿನಗಿದೆ. ಅದಕ್ಕೇ ನಾನು ಸೋತು ನಿನ್ನನ್ನು ಗೆಲಿಸಿದೆ. ನೀನು ನನ್ನ ಜತೆಯಲ್ಲಿದ್ದರೆ ನಿನಗೆ ನನ್ನ ಮಲ್ಲವಿದ್ಯೆಯನ್ನು ಕಲಿಸಿಕೊಡುವೆನು" ಎಂದನು.

ಭೋಟಾಸಿಂಗ್ ಒಪ್ಪಿದನು. ಮುಂದೆ ಅವನು ಜಟ್ಟೀಕಾಳಗವನ್ನು ಅಭ್ಯಾಸಮಾಡಿ, ಲೋಕ ಪ್ರಸಿದ್ಧನಾಗಿ ಮೆರೆದನು.

ಪಿ. ಎ. ಭಟ್ಟ, ಚೊಕ್ಕಾಡಿ




**ಬಾ**ಬೂಲಾಲನು ಪೂರಿಯಿಂದ ಹಿಂದಿರುಗಿ ಆಗತಾನೇ ರೈಲಿನಿಂದಿಳಿದನು. ಕೂಡಲೇ ತನ್ನ ಷಾಪಿನ ಕಡೆಗೆ ಹೊರಟನು. ಆದರೆ ಷಾಪಿನೊಳಗೆ ಹೋಗಲು ಬಿಡದೆ, ಬಾಗಿಲಿನಲ್ಲಿದ್ದ ಪೋಲೀಸರು ಅವನನ್ನು ತಡೆದರು. ಆಶ್ಚರ್ಯವಾಯಿತು ಅವನಿಗೆ. ಅವನ ಷಾಪಿನೊಳಗೆ ಹೋಗಲು ಅವನನ್ನೆ ತಡೆಯುವುದೆಂದರೇನು?

ದೊಡ್ಡ ಸಾವುಕಾರ ಅವನು. ಊರಲ್ಲಿರುವ ಚಿಕ್ಕ ವಿದ್ಯಾರ್ಥಿಗಳಿಂದಹಿಡಿದು, ದೊಡ್ಡ ಉದ್ಯೋಗಸ್ಥರ ವರೆಗೂ ಅವನ ಷಾಪಿನಲ್ಲಿ ವ್ಯಾಪಾರಮಾಡುತ್ತಾರೆ. ಬಾಬೂಲಾಲನ ಷಾಪೆಂದರೆ ಜನರಿಗೆಲ್ಲಾ ಅಷ್ಟು ನಂಬುಗೆ.

ಷಾಪಿನ ದ್ವಾರದ ಬಳಿಯಲ್ಲಿ ಪೋಲೀಸರು ನಿಂದಿರುವುದೂ, ಹೊರಗೆ ಅನೇಕಮಂದಿ ಗುಂಪುಗೂಡಿರುವುದೂ ನೋಡಿ ಬಾಬೂಲಾಲನು ಆಶ್ಚರ್ಯದಿಂದ ನಿಂತನಷ್ಟೆ? ಅಷ್ಟರಲ್ಲಿ ಒಳಗಿನಿಂದ ಬಾಬೂಲಾಲನ ಮಗ— "ನನ್ನ ತಂದೆ ಸಾರ್, ನನ್ನ ತಂದೆ ಬಂದಿದಾರೆ ಸಾರ್" ಎನ್ನುತ್ತಾ, ಸಬ್ಬಿನಸ್ಪೆಕ್ಟರನ್ನು ಕರೆದುಕೊಂಡು ಬಾಗಿಲ ಬಳಿಗೆ ಬಂದನು. ಇನ್ಸ್‌ಪೆಕ್ಟರ ಆಜ್ಞೆಯಂತೆ ಪೋಲೀಸರು ಬಾಬೂಲಾಲನನ್ನು ಒಳಗೆ ಬಿಟ್ಟರು.

ಆಗ ಷಾಪಿನೊಳಗೆ ವಿಚಾರಣೆ ನಡೆಯಿತು. ಯಾರಿಗೆ ಏನು ಗೊತ್ತಿರುವುದೋ ಅವರು ಅದನ್ನು ಹೂ ಸುರಿದ ಹಾಗೆ ಪೋಲೀಸು ಅಧಿಕಾರಿಯೊಡನೆ ಹೇಳಿಕೊಂಡರು. ಅವರವರು ಹೇಳುತ್ತಿದ್ದ ವಾಙ್ಮೂಲಗಳನ್ನೆಲ್ಲಾ ಜಮೇದಾರನು ಅಟ್ಟೆಅಟ್ಟೆಯಾಗಿರುವ ಕಾಗದದ ಮೇಲೆ ಬರೆದುಕೊಂಡನು.

ಷಾಪು ಯಜಮಾನನಾದ ಬಾಬೂಲಾಲನು ಊರುಬಿಟ್ಟುಹೋಗಿ ಹತ್ತು ದಿನಗಳಿಗೆ ಮೇಲೆ ಆಗಿದ್ದುವು. ಈಗ ಇಲ್ಲಿಗೆ ಬಂದು ಏನು ನೋಡಿದನೋ ಅದು ಹೊರತು ಮತ್ತೇನೂ ಅವನಿಗೆ ಗೊತ್ತಿಲ್ಲ.

ಅನಂತರ ಬಾಬೂಲಾಲನ ಮಗ ಹೀಗೆ ಹೇಳಿದ:— "ಈ ದಿನ ಬೆಳಗ್ಗೆ ಷಾಪಿಗೆ ಬಂದು ನೋಡಿದಾಗ ಬಾಗಿಲೂ ಬೀಗಗಳೂ ಎಲ್ಲಾ ಇದ್ದ ಹಾಗೆಯೇ ಇದ್ದುವು, ಷಾಪಿನೊಳಗೆ ನಿನ್ನೆ ಇದ್ದ ಸಾಮಾನುಗಳಲ್ಲಿ ಅನೇಕ ಸಾಮಾ

ಟಿ. ತ್ರಿಯಂಬಕ, ಹೊನ್ನಾವರ

ನುಗಳು ಈ ದಿನ ಮಾಯವಾಗಿವೆ," ಎಂದು ಲೆಕ್ಕ ವಿವರಗಳೊಂದಿಗೆ ಹೇಳಿದನು. ಕಳವಾದ ಸಾಮಾನುಗಳ ವಿವರವನ್ನು ನೋಡಿ ಪಟ್ಟಿ ಬರೆದು ಅದರ ಮೊತ್ತ ಮೌಲ್ಯವನ್ನೂ ಗಣಿಸ ತೊಡಗಿದರು.

ಹೀಗೆ ಆ ಷಾಪಿನಲ್ಲಿ ಆಕಸ್ಮಿಕವಾಗಿ ಚೋರೀ ಜರಿಗಿತ್ತು. ಕಳ್ಳನು ಕಳವು ಮಾಡಿದ ಮಾರ್ಗವು ಮಾತ್ರ ಕಾಣದಾಗಿದೆ. ಆದರೂ ಅನುಮಾನವಿರುವವರ ಹೆಸರನ್ನೆಲ್ಲಾ ಅಧಿಕಾರಿ ಬರೆದುಕೊಂಡನು. ಸಂದೇಹದ ಸ್ಥಳವನ್ನೆಲ್ಲಾ ಪರಿಶೋಧಿಸಿ ನೋಡಿದರು. ಯಾರ ಮೇಲೆ ಕೇಸು ಮಾಡಲಿಕ್ಕೂ ತಕ್ಕ ಬಲವು ಸಿಕ್ಕಲಿಲ್ಲ.

ಮೊದಲು ಕಾವಲುಗಾರ ಘೂರ್ಕಾನನ್ನು ಕೈದು ಮಾಡುವಂತೆ ಅಧಿಕಾರಿಯ ಅಜ್ಞೆಯಾಯಿತು. ಕೂಡಲೇ ಆಜ್ಞೆಯೂ ನೆರವೇರಿತು.



ಆ ಘೂರ್ಕನು "ನಾನೇನೂ ಅರಿಯೆ"ನೆಂದು ಮೊರೆಯಿಟ್ಟುಕೊಂಡನು. ಪೋಲೀಸರು ಅದನ್ನೆಲ್ಲಾ ಕೇಳಲೇ ಇಲ್ಲ.

ಇನ್ನೇನು ಮಾಡುವುದು? ಪೋಲೀಸರಿಗೆ ಇನ್ನೇನು ಕೆಲಸವಿದೆ? ಹೇಗೆ ಕಳುವಾಗಿರಬಹುದು? ಎಂದು ಯೋಚಿಸುತ್ತಾ ಬಾಬೂಲಾಲ್ ತನ್ನ ಸ್ಥಾನದಲ್ಲಿ ಕುಳಿತನು. ಯಥಾಪ್ರಕಾರ ವ್ಯಾಪಾರವೂ ನಡೆಯ ತೊಡಗಿತು.

ಅಷ್ಟರಲ್ಲಿ ಒಬ್ಬ ಶ್ರೀಮಂತ ಯುವಕನು ಒಳಗೆ ಬಂದು, ನಗುನಗುತ್ತಾ ಬಾಬೂಲಾಲನನ್ನು ಮಾತಾಡಿಸಿದನು. ಯೋಗಕ್ಷೇಮಗಳನ್ನು ವಿಚಾರಿಸಿದನು. ಅವನು ಆಗಾಗ ಆ ಷಾಪಿಗೆ ಬಂದು ವ್ಯಾಪಾರ ಮಾಡುವ ಒಬ್ಬ ಗಿರಾಕಿಯಾಗಿದ್ದನು. ಷಾಪಿನಲ್ಲಿ ಕಳುವಾಯಿತೆಂದೂ, ಪೋಲೀಸು ವಿಚಾರಣೆ ನಡೆಯುತ್ತಿದೆಯೆಂದೂ ತಿಳಿದು ಬಹಳ ವಿಚಾರವನ್ನು ವ್ಯಕ್ತಪಡಿಸಿದನು.

ಬಳಿಕ ಅವನು ಹೊರಡುವ ಸಮಯಕ್ಕೆ ಬಾಬೂಲಾಲನ ಮಗನನ್ನು ನೋಡಿ— "ಭಾಯಿ! ಈ ದಿನ ನನಗೆ ಊರಿನಿಂದ ಕಾಗದ ಬಂದಿದೆ. ಈಗ ಎಕ್ಸ್‌ಪ್ರೆಸ್ಸಿನಲ್ಲಿಯೇ ಜರೂರಾಗಿ ಊರಿಗೆ ಹೋಗಬೇಕು. ನಿನ್ನೆ ಸಾಯಂಕಾಲ ನಾನಿಲ್ಲಿ ಇಟ್ಟುಹೋದ ನನ್ನ ಸಾಮಾನಿನ ಪೆಟ್ಟಿಗೆಯನ್ನು ಕೊಡಿಸುವಿರಾ?" ಎಂದನು. ಮತ್ತು ಹೊರಗೆ ಕಾದು ನಿಂತಿದ್ದ ನಾಲ್ವರು ಅವನ ಬಂಡಿಯಾಳುಗಳಿಗೂ ಒಳಗೆ ಬರುವಂತೆ ಸನ್ನೆ ಮಾಡಿದನು.





ಪೋಲೀಸ್ ಅಧಿಕಾರಿ "ಏನು ಸಂಗತಿ?" ಎಂದು ಕೇಳಿದನು. ಬಾಬೂಲಾಲನ ಮಗನು ಒಂದು ದೊಡ್ಡ ಪೆಟ್ಟಿಗೆಯನ್ನು ತೋರಿಸಿ, ಸಂಗತಿ ತಿಳಿಸಿ, ಆ ಯುವಕನಿಗೆ ಅದನ್ನು ಕೊಡಲು ಅನುಜ್ಞೆಯನ್ನು ಕೇಳಿದನು. ಅಧಿಕಾರಿ ಆ ಪೆಟ್ಟಿಗೆಯನ್ನು ಪರೀಕ್ಷೆ ಮಾಡಿದನು. ಅದಕ್ಕೆ ಬೀಗ ಹಾಕಿತ್ತು- "ಸರಿ ಕೊಂಡೊಯ್ಯಲಿ" ಎಂದನು ಅಧಿಕಾರಿ.

ನಾಲ್ಕು ಆಳುಗಳು ಜಾಜೀಹಲಗೆಯ ಪೆಟ್ಟಿಗೆಯನ್ನು ಎತ್ತಿಕೊಂಡು ಬಹು ಕಷ್ಟದಿಂದ ಹೊರಗೆ ತರ ತೊಡಗಿದರು. ಅವರಿಗೆ ಎತ್ತಲಾರದಷ್ಟು ಭಾರವಾಗಿತ್ತು ಆ ಪೆಟ್ಟಿಗೆ. ಹೇಗೋ ಕಷ್ಟಪಡುತ್ತ ಬಾಗಿಲವರೆಗೆ ತಂದರು.

ಅವರು ಎಷ್ಟು ಜಾಗ್ರತೆಯಿಂದ ಎತ್ತಿದರೂ ಕೈಜಾರಿ ಆ ಪೆಟ್ಟಿಗೆ ಕೆಳಗೆ ಬಿದ್ದು ದೊಡ್ಡ ಶಬ್ದವಾಯಿತು. ಆ ಶಬ್ದದೊಂದಿಗೆ ಪೆಟ್ಟಿಗೆಯೊಳಗೆ ಮನುಷ್ಯನ ಶಬ್ದವೊಂದು ಕೇಳಿ ಬಂತು!

ಪೋಲೀಸು ಅಧಿಕಾರಿ ಆಶ್ಚರ್ಯಪಟ್ಟು, ಕೂಡಲೇ ಆ ಪೆಟ್ಟಿಗೆಯನ್ನು ಒಡೆಯಿಸಿದನು. ಅದರೊಳಗೆ ಒಬ್ಬ ಮನುಷ್ಯ ಮಲಗಿದ್ದ. ಅವನ ಸುತ್ತೂ ಕಳುವಾದ ಸಾಮಾನುಗಳೂ ಇದ್ದವು! ಒಳಗಿನಿಂದ ಬೀಗ ಹಾಕಲಿಕ್ಕೂ ತೆಗೆಯಲಿಕ್ಕೂ ಬರುವಂತೆ ಅದರ ರಚನೆಯಿತ್ತು!

ಒಡನೇ ಪೋಲೀಸು ಇನ್ಸ್‌ಪೆಕ್ಟರು ಪೋಲೀಸರ ಸಹಾಯದಿಂದ ಆ ಶ್ರೀಮಂತ ಯುವಕನನ್ನೂ, ಪೆಟಿಗೆಯೊಳಗೆ ಮಲಗಿದ್ದವನನ್ನೂ ಕೈದು ಮಾಡಿಬಿಟ್ಟರು.

ಮತ್ತೆ ಪೂರ್ತಿಯಾಗಿ ವಿಚಾರಣೆ ಜರುಗಿತು. ಅಂಗಡಿಯಲ್ಲಿ ಯಾವ ಸಾಮಾನುಗಳು ಕಳುವಾಗಿವೆ ಎಂದು ಹೇಳಲಾಯಿತೋ ಅವೆಲ್ಲಾ ಆ ಪೆಟ್ಟಿಗೆಯೊಳಗಿದ್ದುವು. ಒಂದೂ ತಪ್ಪಿರಲಿಲ್ಲ.

ವಿಚಾರಣೆ ಪೂರ್ತಿಯಾದಾಗ ಆ ಕಿಲಾಡಿ ಯುವಕ ಇದೇ ರೀತಿ ವ್ಯಾಪಾರಿಯ ಸೋಗಿನಿಂದ ಕಳವು ಮಾಡುತ್ತಿದ್ದ ಒಬ್ಬ ಹಳೆಯ ಕೇಡಿ ಎಂದು ತಿಳಿದುಬಂತು

ಈ ಸಮಾಚಾರ ಪತ್ರಿಕೆಗಳಲ್ಲಿಯೂ ಪ್ರಕಟವಾಗಿ ಎಲ್ಲಾ ದೇಶದವರಿಗೂ ತಿಳಿಯಿತು. ಅಂದಿನಿಂದ ವರ್ತಕರೆಲ್ಲಾ ತುಂಬಾ ಜಾಗ್ರತೆಯಾಗಿದ್ದರು-





# ಹುಲಿ ಮಾದಣ್ಣ



ಮಾದಣ್ಣನೆಂಬುವ ಬಲು ದೊಡ್ಡಾಳು,
ಸೋಣಂಗೇರಿಯ ಶೂರ ಒಡ್ಡಾಳು.
ಕೇಪಿನ ಕೋವಿಯು ಹೆಗಲಿನ ಮೇಲೆ,
ಮದ್ದಿನ ಚೀಲವು ಎದೆಗೊಂದು ಮಾಲೆ!

ಒಬ್ಬನೆ ಕೈಬೀಸಿ ನಡೆದ ಮಾದಣ್ಣ!
ಕಾಡಿನ ಪೊದರಿಗೆ ಹಾಕಿದ ಕಣ್ಣ!
ಪಕ್ಕದ ಪೊದೆಯಿಂದ ಸರಬರ ಆಯ್ತು,
ಫಕ್ಕನೆ ಮಾದನ ಧೈರ್ಯವು ಹೋಯ್ತು.

ಧೈರ್ಯದ ಹಿಂದೆಯೆ, ಓಡಿ ಮಾದಣ್ಣ.
ಹಿಂತಿರುಗಿ ನೋಡಲು ಹುಲಿಪಟ್ಟೆಬಣ್ಣ.
ನೆಗೆಯುತ್ತ ಬರುತಿರೆ, ಕೈಕಾಲು ನಡುಗಿ;
ಬಿದ್ದನು ಮಾದನು, ಉಸಿರೆಲ್ಲ ಅಡಗಿ.

ಹೆಬ್ಬುಲಿ ಮಾದನ ಮೈಮೇಲೆ ಬೀಳೆ,
ಹೆಗಲಿನ ಕೋವಿಯ ಢಂ! ಶಬ್ದ ಕೇಳೆ.
ಆರ್ಭಟೆಯಿಕ್ಕುತ ಹುಲಿ ಬಿತ್ತು ದೂರ.
ಮಾದಣ್ಣ ಬಿದ್ದನ ಮೇಲೆದ್ದು ಬಾರ!

ಮೆಲ್ಲನೆ ಮಾದಣ್ಣ ಕಣ್ಣನು ತೆರೆದು,
ಹುಲಿಯನ್ನು ನೋಡಿದ ನಿಮಿಷಗಳೈದು.
ಸತ್ತಿತು ಹುಲಿಯೆಂದು ಮಾದನು ತಿಳಿದು,
ಕುತ್ತಿದ ಕೋವಿಯ ಅಲುಗಿಗೆ ಎಳೆದು.

ಸೋಣಂಗೇರಿಯ ಪೇಟೆಯ ಕಡೆಗೆ,
ಹೊರಟನು ಮಾದಣ್ಣ ಜಂಭದ ನಡಿಗೆ.
ಪೇಟೆಯ ಜನರೆಲ್ಲ ಮಾದನ ಕಂಡು,
ಮೆರವಣಿಗೆ ಮಾಡಿದರವನ ಮುಂಕೊಂಡು.

ಶಿವಶಂಕರ,-ಪುಣಚಾ




## 2

ಆ ಕ್ಷಣದಲ್ಲಿ "ತಾಳಿ! ತಾಳಿ!" ಎಂಬ ಕೂಗೊಂದು ಕೇಳಿಸಿತು. ಎಲ್ಲರೂ ಆ ಕಡೆಗೆ ತಿರುಗಿನೋಡಿದರು. ಕಿರಾತರಾಜನು "ತಾಳಿ! ಮಹೀಪಾಲನ ತಲೆಯಿಂದ ರತ್ನಕಿರೀಟವನ್ನು ತೆಗೆಯಬೇಕು!" ಎಂದು ಕೂಗಿ ಹೇಳಿದನು. ಎಲ್ಲರೂ ಒಮ್ಮೆ ನಿಸ್ತಬ್ಧರಾದರು. ದುಃಖಭಾರದಿಂದ ಪ್ರಮೋದನೂ ತಲೆತಗ್ಗಿಸಿ ನಿಂತನು.

ಒಡನೇ ಪುರೋಹಿತನು ಎತ್ತಿದ ಕತ್ತಿಯನ್ನು ಕೆಳಗಿಟ್ಟು, ರಾಜಕುಮಾರನ ಕಿರೀಟಕ್ಕೆ ಕೈಚಾಚಿದನು.

ಅಷ್ಟರಲ್ಲಿಯೇ ಎಲ್ಲರ ಗುಂಡಿಗೆಯೂ ದಡ್ಡರಿಸಿ ಹೋಗುವಂತೆ—"ಹಾ! ಕುಮಾರಾ, ಅನ್ಯಾಯವಾಗಿ ನಿನ್ನನ್ನೆ ಬಲಿ ಕೊಡುತ್ತಾರೆಯೋ?" ಎಂದೊಂದು ಬಲವಾದ ಕೋಪಾರ್ತನಾದವು ನಾಲ್ಕು ಸುತ್ತಲೂ ಮಾರ್ನೊಳಗಿತು!

ಎಲ್ಲಿಂದ ಈ ಶಬ್ದವು ಬಂತೆಂದು ಜನರು ಅತ್ತಿತ್ತ ನೋಡಿದರು. ಆಕಾಶದಲ್ಲೊಂದು ಸುವರ್ಣ ಹಂಸವು ಕೆಳಗಿಳಿದು ಬರುತ್ತಿತ್ತು! "ಹಂಸ! ಹಂಸ!" ಎಂದು ಜನರು ಕೇಕೇ ಹಾಕಿದರು. ಅಷ್ಟರಲ್ಲಿ ಆ ಹಂಸವು ತೀರಾ ಕೆಳಗೆ ಬಂದುಬಿಟ್ಟಿತ್ತು.

ಅದು ಮಹೀಪಾಲನ ಬಳಿಗೇ ಬಂದು "ಬಾರೋ ನನ್ನ ಕಂದಾ!" ಎಂದಿತು. "ಅಮ್ಮಾ! ಅಮ್ಮಾ!" ಎನ್ನುತ್ತಾ ಮಹೀಪಾಲನು ಆ ಹಂಸದ ಕೊರಳನ್ನು ಸುತ್ತಿಕೊಂಡನು. ತತ್‌ಕ್ಷಣವೇ ರತ್ನಕಿರೀಟಧಾರಿಯಾದ ಮಹೀಪಾಲನನ್ನು ಬೆನ್ನಿನಮೇಲೇರಿಸಿಕೊಂಡು, ಆ ಹಂಸವು ಆಕಾಶಲೋಕಕ್ಕೆ ಹಾರಿಹೋಯಿತು! ಇದೆಲ್ಲಾ ಒಂದೇ ನಿಮಿಷದೊಳಗೆ ನಡೆದು ಹೋಯಿತು. ಎಲ್ಲರೂ ಸ್ತಂಭೀಭೂತರಾಗಿದ್ದರು.




ಎಚ್ಚರಕ್ಕೆ ಬಂದಾಗ ಆ ಹಂಸವು ದೂರ ಹೋಗಿತ್ತು. ಆ ಹಂಸದ್ವನಿ ಪ್ರಮೋದನ ಮೊದಲನೇ ರಾಣಿಯಾದ ಗಂಧರ್ವಿಣಿಯ ದೆಂದು ಈಗ ತಿಳಿಯಿತು. ತಾಯಿಯೇ ತನ್ನ ಕುಮಾರನನ್ನು ಎತ್ತಿಕೊಂಡು ಹೋಗಿಬಿಟ್ಟ ಳೆಂದು ಎಲ್ಲರೂ ಅರಿತರು.

ಹಾರುತ್ತಿರುವ ಹಂಸವನ್ನು ನೋಡಿ ಪುರೋಹಿತನಾದ ರಾಜಗುರು ಆವೇಶದಿಂದ– "ಹಿಡಿಯಿರಿ! ಹೊಡೆಯಿರಿ!! ಮಾಯದ ಪಕ್ಷಿ!!!" ಎಂದು ಕೂಗಿ ಅವಸರಪಡಿಸಿದನು. ಎಲ್ಲರೂ ಅತ್ತಿತ್ತ ಕುಣಿದಾಡಿದರೇ ಹೊರತು, ಆ ಪಕ್ಷಿಯನ್ನೇನು ಮಾಡಲಿಕ್ಕೂ ಯಾರಿಗೂ ಸಾಧ್ಯವಾಗಲಿಲ್ಲ.

"ಅನ್ಯಾಯವಾಗಿ ನಿನ್ನನ್ನೇ ಬಲಿ ಕೊಡು ತ್ತಾರೆಯೇ!" ಎಂಬ ಆ ಹಂಸದ ವಾಕ್ಯ ಎಲ್ಲರ ಕಿವಿಯಲ್ಲಿಯೂ ತಿರುಗುತ್ತಿತ್ತು. ಪುರೋಹಿತನ ಆವೇಶವನ್ನು ನೋಡಿ ಅನೇಕ ರಿಗೆ ಸಂಶಯವೂ ಉಂಟಾಯಿತು. ಎರಡು ವರ್ಷ ದೇಷಾರಿಷ್ಟವು ತಲೆಹಾಕಿದ್ದಕ್ಕೂ, ರಾಜ ಕುಮಾರನನ್ನು ಬಲಿಕೊಡಬೇಕೆಂದು ದೇಶ ದಲ್ಲಿ ಪುಕಾರು ಹುಟ್ಟಿದ್ದಕ್ಕೂ, ಈ ಘಟನೆಗೂ ಏನೋ ಸಂಬಂಧವಿರುವಂತೆ ತೋರಿತು. ಅನೇ ಕರು ಗುಜುಗುಜು ಮಾತಾಡಿಕೊಂಡರು. ಅನೇಕರು ರಾಜಕುಮಾರನು ಸುರಕ್ಷಿತವಾಗಿ ತಾಯಿಯ ಮಡಿಲನ್ನು ಸೇರಿದನೆಂದು ಸಂತೋಷ ಪಟ್ಟರು. ಹೀಗೆ ಬಗೆ ಬಗೆಯ ಜನರು ಬಗೆಬಗೆಯಾಗಿ ಮಾತಾಡಿಕೊಂಡರು.

ಪ್ರಮೋದ ರಾಜನೂ, ಕುಮಾರನ ಗಂಡವು ಕಳೆದುದನ್ನು ಕಣ್ಣಾರೆ ನೋಡಿ ಭಾರವಿಳಿದವ ನಂತಿದ್ದ. ಅವನ ಕಣ್ಣು ಚೆನ್ನಾಗಿ ತೆರೆದು ಕೊಂಡಿತು. ಯೋಚನೆ ಮಿಂಚಿನಂತೆ ಓಡಿತು. ತನ್ನಮೂಢತನಕ್ಕೆ ತನ್ನೊಳಗೆ ತಾನೇ ಹಳಿದು ಕೊಂಡು, ಯೋಚಿಸುತ್ತಾ ಒಂದು ಸ್ತಿಮಿತಕ್ಕೆ ಬರುತ್ತಿದ್ದನು.

"ಮಾಯಪಕ್ಷಿ!" ಎಂದು ಕೂಗುತ್ತ, ಆವೇಶದಿಂದಿರುವ ಪುರೋಹಿತನನ್ನು ಬಂಧಿಸು ವಂತೆ, ಪ್ರಮೋದನು ಭಟರಿಗೆ ಆಜ್ಞಾಪಿಸಿ ದನು. ಅದನ್ನು ಕೇಳುತ್ತಲೇ ಕಿರೀರಾಣಿ ಮಂದಾಕಿನಿ ಬೆದರಿಬಿದ್ದಳು. ಅವಳ ತಲೆ ಮಿಂಚಿನ ವೇಗದಲ್ಲಿ ತಿರುಗಿತು. ಸಪ್ಪಳ ಮಾಡದೆ ಅವಳು ಅಲ್ಲಿಂದ ಸರಸರನೆ ತನ್ನ ಅಂತಃಪುರವನ್ನು ಹೋಗಿ ಸೇರಿದಳು.



ತನ್ನ ಮಗಳ ಚರ್ಯೆಯನ್ನೇ ಕಣ್ಣಿಟ್ಟು ನೋಡುತ್ತಿದ್ದ ಕಿರಾತರಾಜನು, ಏನೋ ಅಪಾಯವನ್ನು ಗ್ರಹಿಸಿಕೊಂಡು ಅವಳ ಹಿಂದೆ ಅವನೂ ಹೋದನು. ಅವನು ಹೋಗಿ ನೋಡಿದಾಗ, ಮಂದಾಕಿನಿ ಶಯ್ಯಾಮಂದಿರ ದಲ್ಲಿ ಬಿದ್ದುಕೊಂಡಿದ್ದಳು.

"ಅಪ್ಪಾ, ಕ್ಷಮಿಸಿ, ಇಷ್ಟರವರೆಗೆ ನಾನು ಒಳ್ಳೆಯವಳೆನಿಸಿಕೊಂಡಿದ್ದೆ. ಈಗ ರಾಜಗುರು ಸಿಕ್ಕಿಬಿದ್ದ. ನಾಳಿನ ವಿಚಾರಣೆಯಲ್ಲಿ ಅವನು ಸತ್ಯವನ್ನು ಹೇಳುತ್ತಾನೆ. ಆಗ ನಾನು ಕೆಟ್ಟವ ಳಾಗುತ್ತೇನೆ. ಅದಕ್ಕಾಗಿ ನಾನು ಈಗಲೇ ಹೊರಟುಬಿಟ್ಟೆ. ಅಪ್ಪಾ! ನನ್ನಕಂದ! ಭಾನು ತೇಜ! ನೀನೇ ನೋಡಿಕೋ! ಅಣ್ಣನನ್ನು ಕೂಡಾ ಇಲ್ಲಯೇ ಇರುವಂತೆ ಹೇಳು. ನನ್ನ ಮರ್ಯಾದೆ ನಿನ್ನ ಕೈಗೇ...." ಎನ್ನುತ್ತಾ ಪ್ರಾಣವನ್ನು ಬಿಟ್ಟಳು. ಅವಳ ಮರಣವನ್ನು ನೋಡುತ್ತಾ ಕಿರಾತರಾಜನು ಕೈ ಕೈ ಹಿಸುಕಿ ಕೊಂಡನು.

ಕಿರಾತರಾಜನು ದುಃಖಿಸುತ್ತಾ—"ರಾಜ ಕುಮಾರ ಮಹೀಪಾಲನ ಕಷ್ಟವನ್ನು ಕಾಣಲಾ ರದೆ, ಮಂದಾಕಿನಿ ಎದೆಯೊಡೆದು ಸತ್ತಳು!" ಎಂದು ವಿಲಪಿಸಿದನು.

ಪ್ರಮೋದನೂ ಅಲ್ಲಿಗೆ ಬಂದು—"ಹಾ! ನಾನೆಂತಹ ದುರದೃಷ್ಟವಂತ! ಹಿರಿಯರಾಣಿ ಯನ್ನು ಕೈಯಾರೆ ಹೋಗಲಾಡಿಸಿಕೊಂಡೆ. ಮಗನಿಗೆ ಬಂದ ಗಂಡವು ತಪ್ಪಿ, ಅವನು ತಾಯಿಯ ಮಡಿಲಲ್ಲಿ ಸೇರಿದನೆಂದು ಸಂತೋಷ ಪಡುವಾಗ, ನನ್ನ ಪ್ರಿಯಳಾದ ಮಂದಾಕಿನಿಯೂ ಸತ್ತುಹೋದಳಲ್ಲಾ! ಇನ್ನಾರು ನನಗೆ ದಿಕ್ಕು?...." ಎಂದು ಬಗೆ ಬಗೆಯಾಗಿ ದುಃಖಿಸಲಾರಂಭಿಸಿದನು.

ಈ ವಾರ್ತೆಯು ನಗರದೊಳಗೆಲ್ಲಾ ಹರಡಿ ಕೊಂಡು ಹೋಯಿತು. ಮಂದಾಕಿನಿ ತುಂಬಾ ಕೋಮಲಹೃದಯೆ ಎಂದು ಹೇಳಿಕೊಳ್ಳುತ್ತಾ ಪ್ರಜೆಗಳು ತುಂಬಾ ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಎಲ್ಲರ ಬಾಯಲ್ಲಿಯೂ ಈ ಆಶ್ಚರ್ಯದ ಮಾತೇ ಮಾತು!

ಯಥಾ ಕಾಲದಲ್ಲಿ ರಾಜಗುರುವಿನ ವಿಚಾ ರಣೆ ಜರುಗಿತು. ಅವನು ಇದ್ದದಿದ್ದಂತೆ ಎಲ್ಲ ವನ್ನೂ ಹೇಳಿದನು. ಎಲ್ಲವೂ ಚಿಕ್ಕರಾಣಿಯ ಇಷ್ಟದಂತೆ ತಾನು ನಡೆಸಿದ ತಂತ್ರವೆಂದೂ, ಮಗಳಿಗೆ ಸಹಾಯ ಮಾಡಲಿಕ್ಕಾಗಿಯೇ




ಕಿರಾತರಾಜನು ಇಲ್ಲಿಗೆ ಬಂದು ಸೇರಿರುವ ನೆಂದೂ ರಾಜಗುರು ಸತ್ಯವನ್ನೇ ಹೇಳಿದರೂ ಪ್ರಮೋದನು ನಂಬಲಿಲ್ಲ. ಪ್ರಜೆಗಳೂ ನಂಬ ಲಿಲ್ಲ. ಎದೆಯೊಡೆದು ಸತ್ತುಹೋದ ರಾಣಿಯ ಮೇಲೆ ತಪ್ಪನ್ನು ಹಾಲಿಸಿ ತಾನು ತಪ್ಪಿಸಿ ಕೊಳ್ಳಲು ನೋಡುತ್ತಿದ್ದಾನೆಂದು ಎಲ್ಲರೂ ಭಾವಿಸಿದರು.

ಪ್ರಮೋದನು ಉಗ್ರನಾಗಿ—“ಓ ದುಷ್ಟ ಪುರೋಹಿತನೇ! ಮಂದಾಕಿನಿಯು ಎಷ್ಟು ಕೋಮಲೆ! ಎಂಥ ದಯಾಮಯಿ! ರಾಜ ಕುಮಾರನ ಮೇಲೆ ನೀನು ಮಾಡಿದ ಭಯಂಕರ ವನ್ನು ನೋಡಿ ಅವಳು ಎದೆಯೊಡೆದು ಸತ್ತದ್ದೇ ಅವಳ ಸದ್ಗುಣಕ್ಕೆ ಸಾಕ್ಷಿ! ನೀನು ನೀಚ! ನೀನು ದೇಶದಲ್ಲಿ ಇಲ್ಲದ ಪುಕಾರನ್ನು ಹುಟ್ಟಿಸಿ ನನ್ನನ್ನೇ ನಂಬಿಸಿ ರಾಜಕುಮಾರನ ಬಲಿಗೆ



ಯತ್ನಿಸಿದಿ; ನಾಳೆ ಭಾನುತೇಜನನ್ನೂ, ಆ ಮೇಲೆ ನನ್ನನ್ನೂ ಹೀಗೇ ಮಟ್ಟಮಾಡಿ, ನಮ್ಮ ರಾಜ್ಯವನ್ನೆ ನುಂಗಿಕೊಳ್ಳುವ ಗತ್ತು ನಿನ್ನದು! ನಿನ್ನನ್ನು ಏನು ಮಾಡಿದರೂ ಪಾಪವಿಲ್ಲ, ಹೋಗು. ನಮ್ಮ ರಾಜ್ಯವನ್ನೆ ಬಿಟ್ಟು ಹೊರಟು ಹೋಗು!” ಎಂದು ಹೇಳಿ ಅವನನ್ನು ಗಡೀ ಪಾರು ಮಾಡಿಸಿಬಿಟ್ಟನು.

ಹೀಗೆ ರಾಜನಿಂದ ಪರಾಭವಗೊಂಡು, ಶಕ್ತಿಹೀನನಾಗಿಹೋದ ಆ ರಾಜಗುರು ಹಿಂದಿರುಗಿ ನೋಡದೆಯೇ ಹೋಗುತ್ತಿದ್ದ. ಅವನಿಗೊಂದು ದೊಡ್ಡ ವೈರಾಗ್ಯಭಾವ ವುಂಟಾಯಿತು. ಹೆಂಡತಿ, ಮಕ್ಕಳು, ಧನ-ಧಾನ್ಯಮೊದಲಾದ ಯಾವುದೊಂದಾಶೆಯೂ ಅವನಿಗೀಗ ಇಲ್ಲ. “ಇನ್ನುಮೇಲೆ ಭಲ್ಲಾಣ ರಾಜ್ಯಕ್ಕೇ ಕಾಲಿಡಲಾರೆ” ಎಂದು ತನ್ನೊಳಗೆ ತಾನೇ ಪತಿಜ್ಞೆಮಾಡಿಕೊಂಡನು. ಕಾಲು ಒಯ್ದತ್ತ ನಡೆಯುತ್ತಿದ್ದನು.

ಹೋಗಿ ಹೋಗಿ ಒಂದು ಅಡವಿಯನ್ನು ಸೇರಿದನು. ಬಳಲಿಹೋಗಿ ಒಂದು ಮರದ ಕೆಳಗೆ ಕುಳಿತನು. ಅದರ ಬೊಡ್ಡೆಗೆ ಒರಗಿ ಕೊಂಡು ವಿಶ್ರಮಿಸುತ್ತಿರುವಾಗ, ಕುದುರೆ ಗೊರಸುಗಳ ಖಟಖಟಸದ್ದು ಕೇಳಿಬರ ತೊಡಗಿತು.

ನೋಡ ನೋಡುತ್ತಿದ್ದಂತೆ ಅಲ್ಲಿಗೆ ಒಬ್ಬ ಯುವಕನು ಬಂದಿಳಿದ. ರಾಜಗುರುವಿನ ಗುರುತು ಅವನಿಗೆ ಸಿಕ್ಕಿತು. ಅವನು ಕಿರಾತ ರಾಜನ ಮಗನಾದ ಮಂದಪಾಲ. ಅದು ಕಿರಾತರಾಜ್ಯಕ್ಕೆ ಸೇರಿದ ಅಡವಿಯಾಗಿತ್ತು.





ಮಂದಪಾಲನು ರಾಜಗುರುವನ್ನು ಸಾದರದಿಂದ ತನ್ನ ದಿವ್ಯಕುಟೀರದ ಕಡೆಗೆ ಕರೆದೊಯ್ದನು. ಅಲ್ಲಿ ಅವನಿಗೆ ಉಪಚಾರಗಳೂ ಜರುಗಿದುವು. ರಾಜಗುರು ಎಷ್ಟೋ ದೈನ್ಯಭಾವದಿಂದ ತನ್ನ ಎಲ್ಲಾ ಸ್ಥಿತಿಗಳನ್ನೂ ಮನಸ್ಸುಬಿಟ್ಟು ಮಂದಪಾಲನೊಡನೆ ಹೇಳಿಕೊಂಡನು.

ಮಂದಪಾಲನು ಅವನನ್ನು ಸಮಾಧಾನಪಡಿಸುತ್ತ—"ಗುರೂಜಿ! ಪ್ರಪಂಚವನ್ನೆ ನಡೆಸುವಷ್ಟು ಪ್ರಜ್ಞಾಶಾಲಿಗಳು ನೀವು. ಇಷ್ಟೊಂದಕ್ಕೆಲ್ಲಾ ಹೀಗೆ ವೈರಾಗ್ಯಭಾವವನ್ನು ತಾಳಬಾರದು. ಧೈರ್ಯವಹಿಸಿರಿ. ನಿಮ್ಮ ಆಶೀರ್ವಾದವೊಂದೇ ನನಗಿದ್ದರೆ ಸಾಕು. ಇಗೋ ಕತ್ತಿಹಿಡಿದುಕೊಂಡು ಹೇಳುತ್ತಿದ್ದೇನೆ. ಯಾವದಿನ ಭಲ್ಲಾಣರಾಜ್ಯದ ಸಿಂಹಾಸನದಲ್ಲಿ ಈ ಮಂದಪಾಲನು ಅಧಿಕೃತನಾಗುತ್ತಾನೋ, ಆ ಕ್ಷಣದಿಂದ ನಿಮಗೆ ಸಮಸ್ತ ಸೌಖ್ಯವೂ ಬರುವುದೆಂದು ನಂಬಿರಿ. ಇದನ್ನು ಸಾಧಿಸುವುದೇ ಇನ್ನು ನನ್ನಗುರಿ!" ಎಂದು ಶಪಥಪೂರ್ವಕವಾಗಿ ಹೇಳಿದನು. ಈ ಶಪಥವನ್ನು ಕೇಳಿ ರಾಜಗುರುವಿಗೆ ಆಶ್ಚರ್ಯವೂ ಆನಂದವೂ, ವಿಚಾರವೂ ಉಂಟಾಯಿತು.

ಈ ಶಪಥದಲ್ಲಿ ರಾಜ ಗುರುವಿನ ಸೇಡೂ ಅಡಗಿರುವುದರಿಂದ ಅವನಿಗೂ ತುಂಬಾ ಸಂತೋಷ. ಆದರೂ ಸಂದೇಹ ಉಂಟಾಗದಿರಲಿಲ್ಲ. "ನಾನು ಇದೇ ಮೊದಲು ಮಂದಾಕಿನಿಯ ಸೂಚನೆಯಂತೆನಡೆದು ಕೆಟ್ಟುಹೋದೆ. ಅವಳು ಮಾತ್ರ ಒಳ್ಳೆಯವಳಾಗಿಯೇ ಸತ್ತಿದ್ದಾಳೆ. ಆ ಕಿರಾತರಾಜ ನನ್ನನ್ನು ಕಾಪಾಡಲು ನೋಡಲೇ ಇಲ್ಲ. ಅವನಿಗೆ ಮಗಳ ಮೇಲೆಯೂ, ಮೊಮ್ಮಗನ ಮೇಲೆಯೂ, ಪೂರ್ಣ ಮಮಕಾರ. ಈಗ ನೋಡಿದರೆ ಈ ಮಂದಪಾಲನಿಗೆ ರಾಜ್ಯಾಕಾಂಕ್ಷೆ ಹಿಡಿದಿದೆ. ಗೆದ್ದಮೇಲೆ ಏನು ಮಾಡುವನೋ? ಈ ಕಿರಾತರನ್ನು ನಂಬುವುದು ಹೇಗೆ? ಆದರೂ ನನಗೀಗ ಇವನೊಂದಿಗಿರುವುದೇ ಮೇಲಾಗಿದೆ. ಮುಂದೆ ನಾನು ಅಧಿಕಾರಕ್ಕೆ ಬಂದಾಗ. ಈಗ ನನಗೆ ಬಂದ ಕೆಟ್ಟಹೆಸರನ್ನಾದರೂ ನನ್ನ ಚಾಕಚಕ್ಯತೆಯಿಂದ ಅಳಿಸಿ ಹಾಕಿಕೊಳ್ಳಬಹುದು. ಮತ್ತು ಪ್ರಮೋದನಮೇಲೂ, ಕಿರಾತರಾಜನ ಮೇಲೂ ಇಷ್ಟ ಬಂದಂತೆ ಹಗೆ ತೀರಿಸಿಕೊಳ್ಳಬಹುದು...." ಎಂದು ಮುಂತಾಗಿ ಯೋಚಿಸಿ,





ಅನಂತರ ಕೊಂಚ ಕಾಲದಲ್ಲಿಯೇ ಭಾನು ತೇಜನಿಗೆ ಒಬ್ಬ ಮಗನು ಹುಟ್ಟಿದನು. ಇದ ರಿಂದ ಪ್ರಜೆಗಳಿಗೆಲ್ಲಾ ಬಹಳ ಆನಂದವಾ ಯಿತು. ಪ್ರಮೋದನೂ ಬಹಳ ಧನ್ಯತೆಯನು' ಅನುಭವಿಸಿದನು. ಆ ಶಿಶುವಿಗೆ 'ಚಿತ್ರಭಾನು' ಎಂದು ನಾಮಕರಣ ಮಾಡಿ ಬಹಳ ಮುದ್ದಿ ನಿಂದ ಬೆಳೆಸುತ್ತಿದ್ದರು.

ಹೀಗೆ ಕಷ್ಟಗಳು ಕಳೆದು ಒಳ್ಳೆಯ ದಿನಗಳು ಬಂದುವಲ್ಲಾ ಎಂದು ರಾಜನೂ ಪ್ರಜೆಗಳೂ ಸಂತೋಷದಲ್ಲಿ ನೆಮ್ಮದಿಯಾಗಿದ್ದಾಗ, ರಾಜಾ ಸ್ಥಾನವನ್ನು ಮತ್ತೆ ಕಲವರ ಪಡಿಸುವಂತಹ ಸಂಗತಿಯೊಂದು ಬಂದಿತು:

ಒಂದು ದಿನ ಪ್ರಮೋದನ ಆಸ್ಥಾನಕ್ಕೆ ಒಬ್ಬ 'ರಾಯಭಾರಿ' ಬಂದನು. ಅವನು ಬಲ್ಲಾ ಣದ ಸಾಮಂತರಾಜನಾದ ಘೂರ್ಜರ ದೇಶ ದಿಂದ ಬಂದಿದ್ದನು. ಬಂದು ಪ್ರಮೋದನಿಗೆ ಒಂದು ಪತ್ರವನ್ನು ಸಮರ್ಪಿಸಿದನು. ಆ ಪತ್ರ ದಲ್ಲಿ ಹೀಗಿತ್ತು:—

"....ಭಲ್ಲಾಣ ರಾಜ್ಯದಲ್ಲಿ ಆನುವಂಶಿಕ ವಾಗಿ ರತ್ನಕಿರೀಟಧಾರಣವು ಪದ್ಧತಿಯಾಗಿ ನಡೆದ ಆಚಾರವಾಗಿತ್ತು. ನಾವೆಲ್ಲಾ ಅಂದರೆ ಸಾಮಂತ ರಾಜರೆಲ್ಲಾ ತಲೆತಲಾಂತರವಾಗಿ ಆ ರತ್ನಕಿರೀಟಧಾರಿಯಾದ ಪ್ರಭುವಿಗೇ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದೆವು. ಈಗ ಆ ರತ್ನಕಿರೀಟವು ಅದೃಶ್ಯವಾಗಿದೆ. ಭಾನು ತೇಜರು ಕಿರೀಟವಿಲ್ಲದ ರಾಜರಾಗಿದ್ದಾರೆ. ರತ್ನಕಿರೀಟವಿಲ್ಲದೆ ಪಟ್ಟಕಟ್ಟಿಸಿಕೊಂಡ ಪ್ರಭು

ಅವನ ಇಷ್ಟಕ್ಕೆ ಸಮ್ಮತಿಸಿ ಅಲ್ಲಿಯೇ ಇದ್ದನು ಇಬ್ಬರೂ ರಹಸ್ಯಮಂದಿರಕ್ಕೆ ತೆರಳಿ ಮಂತ್ರಾ ಲೋಚನೆಗೆ ತೊಡಗಿದರು.

ಕಾಲವು ಹೋದಂತೆ ಪ್ರಮೋದನ ದುಃಖವು ಶಮನವಾಗುತ್ತಾ ಬಂದಿತು. ಮಂದಾ ಕಿನಿ ಹೋದರೂ ಸತ್ತು ವಂಶಾಭಿವೃದ್ಧಿಗಾಗಿ ಭಾನುತೇಜ ಕುಮಾರನೊಬ್ಬನಿರುವನಲ್ಲ. ಎಂಬ ತೃಪ್ತಿಯಿಂದ ಪ್ರಮೋದನು ಕುಮಾರ ನನ್ನು ಎಷ್ಟೋ ಜಾಗರೂಕತೆಯಿಂದ ಕಣ್ಣಿನ ರೆಪ್ಪೆಯಂತೆ ಕಾಪಾಡುತ್ತಿದ್ದನು. ಈಗ ಅವನ ಸರ್ವಸ್ವವೂ ಭಾನುತೇಜನೆಂದರೆ ಅತಿಶಯೋಕ್ತಿ ಯಲ್ಲ.

ಮುಂದೆ ಬೇಗದಲ್ಲಿಯೇ ಭಾನುತೇಜನಿಗೆ ಪರಿಣಯವನ್ನೂ ಪಟ್ಟಾಭಿಷೇಕವನ್ನೂ ಮಾಡಿ ತಕ್ಕನುಟ್ಟಿಗೆ ಮನಃಶಾಂತಿಯನ್ನು ಪಡೆದನು.



ವನ್ನು ನಾವು ಅನೋದಿಸಲಾರೆವು. ಆದ್ದರಿಂದ ಕಪ್ಪ ಕಟ್ಟುವುದಿಲ್ಲವೆಂದೇ ನಮ್ಮೆಲ್ಲರ ತೀರ್ಮಾನವಾಗಿದೆ...."

ಈ ಬಗೆಯ ಪತ್ರವನ್ನು ಓದಿ ಮುಗಿಸಿದಾಗ ರಾಜ ಮಂತ್ರಿಗಳಿಗೆ ವಿಚಾರ ಹಿಡಿಯಿತು. 'ಏನೋ ತಂಟೆ ಬರುತ್ತಿದೆ' ಎಂದು ಯೋಚಿಸಿದರು. "ಪ್ರತ್ಯುತ್ತರ ಕಳುಹಿಸುತ್ತೇವೆ" ಎಂದು ಹೇಳಿ ಆ ರಾಯಭಾರಿಯನ್ನು ವಾಪಸು ಕಳುಹಿಸಿ ಕೊಟ್ಟರು.

ತರುವಾಯ ಪ್ರಮೋದನು ಮಾವನಾದ ಕಿರಾತ ರಾಜನನ್ನು ಕುರಿತು,—"ಮಾವ, ನಮ್ಮ ಸಾಮಂತ ರಾಜರೆಲ್ಲಾ ಬಹಳ ಸಾಧುಗಳಾಗಿಯೂ ಸರಳ ಹೃದಯಿಗಳಾಗಿಯೂ ಇದ್ದರು. ಇಷ್ಟು ಕಾಲದಿಂದ ಇಲ್ಲದ ಈ ಮಾತು ಈಗೇಕೆ ಬಂದಿರಬಹುದು? ಈಗ ನಾವೇನು ಮಾಡೋಣ?" ಎಂದು ಯೋಚನೆ ಕೇಳಿದನು.

ಕಿರಾತರಾಜನು ಚೆನ್ನಾಗಿ ಯೋಚಿಸಿ— "ನಾವು ಉತ್ತರ ಬರೆದು ಕಳುಹಿಸುವುದಕ್ಕಿಂತಲೂ, ಸ್ವತಃ ರಾಯಭಾರಿಯನ್ನು ಕಳುಹಿಸುವುದೇ ಒಳ್ಳೆಯದು. ಈಗ ಸಾಮಂತ ರಾಜರ ಪರಿಸ್ಥಿತಿಯನ್ನು ನೋಡಿದರೆ, ಯಾವ ಸಮಯ ಹೇಗೆ ಬರುತ್ತೋ ಹೇಳಲಾಗುವುದಿಲ್ಲ. ಉದ್ಯೋಗಿಗಳನ್ನು ಕಳಿಸಬಾರದು. ಕಳುಹಿಸುವ ರಾಯಭಾರಿ ಒಳ್ಳೇ ನಂಬಿಗಸ್ಥನಾಗಿರಬೇಕು. ಸಾಮಂತ ರಾಜರನ್ನು ಮಾತು




ಗಳಿಂದ ದಾರಿಗೆ ತರುವ ಒಳ್ಳೇ ಚತುರನಾಗಿರಬೇಕು...." ಎಂದು ಸಲಹೆ ಹೇಳಿದನು.

ಆಗ ಪ್ರಮೋದನು ತಲೆದೂಗುತ್ತಾ— "ಮಾವಯ್ಯ ಚತುರಶ್ರೇಷ್ಠನಾದ ನಮ್ಮ ಮಂದಪಾಲನಿರುವಾಗ ಇನ್ನೊಬ್ಬನನ್ನು ಹುಡುಕುವುದೇಕೆ?—" ಎಂದಂದು ಕೂಡಲೇ ಮಂದಪಾಲನನ್ನು ಬರಮಾಡಿಕೊಂಡನು.

ಎಲ್ಲಾ ಪರಿಸ್ಥಿತಿಗಳನ್ನೂ ಮಂದಪಾಲನಿಗೆ ವಿವರಿಸಿ ಹೇಳಿ, ಪ್ರಮೋದನು ಒಂದು ಪತ್ರವನ್ನು ಕೂಡಾ ಬರೆದು ಕೊಟ್ಟನು.

ಬಳಿಕ ಅವನೊಡನೆ—"ನೀನು ರಾಯಭಾರಿಯಾಗಿ ಹೋಗಿ ನಾನು ಹೇಳಿದಂತೆ ಹೀಗೆ ಹೇಳು. 'ಮೊದಲು ಕಪ್ಪವನ್ನು ಕಟ್ಟಿ ಆಮೇಲೆ ಮಾತಾಡಬೇಕು. ರತ್ನಕಿರೀಟಧಾರಣವು

ನಮ್ಮ ಸ್ವಂತವಿಷಯಕ್ಕೆ ಸಂಬಂಧಪಟ್ಟದೆ. ನಿಮ್ಮಗಳ ರಾಜಕೀಯಕ್ಕೆ ಸಂಬಂಧಿಸಿದ್ದಲ್ಲ. ಇದೊಂದು ನೆನದಿಂದ ಕಪ್ಪಕಟ್ಟದೆ ಧಿಕ್ಕರಿಸಿದ ಪಕ್ಷದಲ್ಲಿ, ನೀವೆಲ್ಲರೂ ಅವಿಧೇಯರೆಂದು ನಾವು ತೀರ್ಮಾನಿಸಿಕೊಳ್ಳ ಬೇಕಾದೀತು.' ಹೀಗೆ ನಮುಭಯಗಳಿಂದ ಅವರ ಮನಸ್ಸಿಗೆ ನಾಟುವಂತೆ ಮಾಡಿ, ನೀನು ಹಿಂದಿರುಗ ಬೇಕು" ಎಂದನು.

ಮತ್ತು ದಾರಿಯಲ್ಲಿ ತೊಂದರೆಯಾಗದಂತೆ ಪ್ರಯಾಣಮಾಡಲು ಅನುಕೂಲವಾಗಿ ರಾಜ ಮುದ್ರಿಕೆಯ ಉಂಗುರವನ್ನು ಕೂಡಾ ಮಂದ ಪಾಲನಿಗೆ ಕೊಟ್ಟು, "ಅಲ್ಲಲ್ಲಿಯ ಉಕ್ಕಡ ಗಳಲ್ಲಿ ಈ ರಾಜಮುದ್ರಿಕೆಯ ಉಂಗುರವನ್ನು ತೋರಿಸಿದರೆ, ನಿನಗೆ ಪ್ರಯಾಣಕ್ಕೆ ಬೇಕಾದ ಸಕಲ ಸೌಕರ್ಯಗಳೂ ದೊರೆಯುತ್ತವೆ. ಯಾವ ರಾಜ್ಯಕ್ಕಾದರೂ ಯಥೇಚ್ಛವಾಗಿ ಹೋಗಬಹುದು" ಎಂದು ಹೇಳಿ ಅವನನ್ನು ಕಳುಹಿಸಿಕೊಟ್ಟನು.

ಆಗ ಕಿರಾತರಾಜನು ತನ್ನ ಮಗನೊಂದಿಗೆ– "ಕುಮಾರಾ, ಹಿಡಿದ ಕಾರ್ಯದಲ್ಲಿ ವಿಜಯ ಶಾಲಿಯಾಗಿ ಬಾ. ಈ ವಿಷಯವನ್ನು ಯಾರಿಗೂ ತಿಳಿಸಬಾರದು. ಎಚ್ಚರಿಕೆ!" ಎಂದು ಎಚ್ಚರಿಸಿದನು.

ಹೀಗೆ ರಾಯಭಾರವನ್ನು ಕೈಗೊಂಡು ಮಂದಪಾಲನು ಪ್ರಯಾಣ ಹೊರಟನು. ರಾತ್ರಿಯೆನ್ನದೆ ಹಗಲೆನ್ನದೆ ಸಾಗುತ್ತಿದ್ದನು. ವಿಶ್ರಾಂತಿಗೆ ಅಲ್ಲಲ್ಲಿರುವ ರಾಜಬಿಡದಿಯಲ್ಲಿ ಳಿದುಕೊಳ್ಳುತ್ತಿದ್ದನು. ಅಲ್ಲಲ್ಲಿಯವರೆಗೆ ನಡೆದ ತನ್ನ ಹಳೆಯ ಕುದುರೆಗಳನ್ನು ಅಲ್ಲಲ್ಲಿಯೇ ಬಿಟ್ಟು, ಹೊಸ ಕುದುರೆಯನ್ನೇರಿಕೊಂಡು ಮುಂದೆ ಮುಂದೆ ಹೋಗುತ್ತಿದ್ದನು. ಇದು ಆ ಕಾಲದ ಪ್ರಯಾಣದ ರೀತಿಯಾಗಿತ್ತು.

ಈ ಬಗೆಯ ಪದ್ಧತಿಯಿಂದ ಮೂರು ದಿನಗಳು ಪ್ರಯಾಣ ಮಾಡಿದನು. ನಾಲ್ಕನೆಯದಿನ ರಾತ್ರಿ ಒಂದು ಬಿಡದಿಯುಲ್ಲಿಳಿದು ಮಲಗಿಕೊಂಡು ಬಳಲಿಕೆ ತೀರಿಸಿಕೊಳುತ್ತಿದ್ದನು.

ಆಗ ಅವನ ಮನಸ್ಸಿನಲ್ಲಿ ಓಡುತ್ತಿದ್ದ ಸಮುಸ್ಯೆಗಳು ಅಷ್ಟಿಷ್ಟಲ್ಲ. ಆಲೋಚನೆ ಮಾಡುತ್ತಾ ಅವನಿಗೆ ತಿಳಿಯದಂತೆಯೇ ಗಾಢನಿದ್ರೆಯಲ್ಲಿ ಮುಳುಗಿಹೋದನು.

ನಟ್ಟಿರುಳು; ಆಗ— (ಇನ್ನೂ ಇದೆ)



## ಮಗುವಿನ ಮಗು

★

ನನ್ನ ಪ್ರೇಮದ ಬೊಂಬೆ
ಅಜ್ಜನಿತ್ತಿಹ ಬೊಂಬೆ
ಅದನು ಬಿಟ್ಟಿರಲಾರೆ
ಯಾರಿಗೂ ಕೊಡಲಾರೆ

ಆರು ಕರೆದರು ಬರದು
ಯಾರೊಡನೆಯೂ ಇರದು
ತಿನಿಸ ಕೊಡದಿರಲಾರೆ
ಉಣಿಸದೆಯೆ ಉಣಲಾರೆ

ನಿತ್ಯ ಜೀವನದಲ್ಲಿ
ಮನದ ದೇಗುಲದಲ್ಲಿ
ಬೆಳಕ ನೀಡುವ ಮೂರ್ತಿ
ಹರಡು ಜಗದಲಿ ಕೀರ್ತಿ

ನನ್ನ ಗೊಂಬೆಯೆ ಚೆಂದ
ಕೊಡುವುದೆನಗಾನಂದ
ಮುಟ್ಟಿದರೆ ತೀಡುವುದು
ಅಗಲಿದಕೆ ಸೊರಗುವುದು

ನಾನೆ ವಿಹಾಯಿಸ-ಬೇಕು
ನನ್ನ ಬಳಿ ಇರಬೇಕು
ನಾನೆ ಜೋಗುಳ ಹಾಡಿ,
ತೂಗಿ ನಿದ್ರಿಸಬೇಕು

—ವಿ. ಆರ್. ಕಾರಂತ, ಮದರಾಸು

## ವೀರರಾಗಿ ಬಾಳುವ

★

ಬನ್ನಿರೆಲ್ಲ ಓಡಿಯೋಡಿ
ಕಿರಿಯರನ್ನು ಒಡನೆಗೂಡಿ॥

ನಾವು ಆಟ ಆಡುವಾ
ತೋಷವನ್ನು ಹೊಂದುವಾ॥

ಸತ್ಯ ಮಂತ್ರ ಜಪಿಸಿ ತಾತ
ದಾಸ್ಯವನ್ನು ಕಳೆದನಾತ॥

ಸತ್ಯವನ್ನೆ ನುಡಿಯುವಾ
ಧೀರರಾಗಿ ಬಾಳುವಾ॥

ಹಿಂಸೆಯಿಂದ ಕ್ಷೇಮವಿಲ್ಲ
ಎಂದು ತಾತ ನೊರೆದನಲ್ಲ॥

ಹಿಂಸೆಯನ್ನು ಕಳೆಯುವಾ
ಧರ್ಮದಿಂದ ನಡೆಯುವಾ॥

ಹಸುರು ಬಿಳಿಯ ಕೆಂಪಿನಿಂದ
ಮೆರೆವ ಧ್ವಜವ ಒಲವಿನಿಂದ॥

ಹಾರಿಸುತ್ತ ನಲಿಯುವಾ
ವೀರರಾಗಿ ಬಾಳುವಾ॥

—ಟಿ. ಚಂದ್ರರಾಜ ಸೆಟ್ಟಿ, ಸಿದ್ದಕಟ್ಟೆ




# ನಮ್ಮತ್ತಿಗೆ ದೊಡ್ಡೋಳು

ಅಂದರಂದರೆ, ಅದೊಂದು ಊರು. ಆ ಊರಿನಲ್ಲಿ ಸರಸಗಾರ ಸಂಗಣ್ಣನ ತಮ್ಮ ರಂಗಣ್ಣ ಅಂತ ಒಬ್ಬ ಇದ್ದ. ಅವನು ಮಾಡುವ ಕೆಲಸ ದೊಡ್ಡ ಕೆಲಸ. ದಿನಾ ಏಳು ಹುಲ್ಲು ಗಾವಲನ್ನು ಸುತ್ತಿ, ಏಳು ಹೊರೆ ಹುಲ್ಲು ಹೊತ್ತುಕೊಂಡು ತಂದರೆ, ಅದನ್ನು ಏಳು ದೊಡ್ಡಿಯೊಳಗಿನ ದನಗಳೆಲ್ಲಾ ತಿನ್ನುವುವು. ತಿಂದು ಅವು ಕೊಡುವ ಹಾಲನ್ನು ಸುತ್ತಾ ಮುತ್ತಿನ ಏಳೂರಿನ ಜನರೆಲ್ಲಾ ಮಾರಿ ಜೀವನ ನಡೆಸುತ್ತಿದ್ದರು.

ಒಂದಾನೊಂದು ದಿನ ರಂಗಣ್ಣ ಹುಲ್ಲು ಹೊರೆ ಹೊತ್ತುಕೊಂಡು ಬಂದು ಮನೆಯ ಅಂಗಳದಲ್ಲಿ ಹಾಕಿ 'ಉಸ್' ಎಂದು ಶ್ವಾಸ ಬಿಟ್ಟು "ಅತ್ತಿಗೇ, ಒಂದು ಲೋಟಾ ನೀರು!" ಎಂದು ಕೂಗಿ ಹೇಳಿದ.

ಅದಕ್ಕೆ ಅವನ ಅತ್ತಿಗೆ ಒಳಗಿಂದಲೇ— "ಓಹ್! ಭಾರೀ ದೊಡ್ಡ ಹೊರೆ ಹೊತ್ತು ಕೊಂಡು ಬಂದು ಬಿಟ್ಯಾ ಮಹಾ? ಬೇಕಾದರೆ ಮುಳುಗಿಸಿಕೊಂಡು ಕುಡಿಯೋ!" ಎಂದಳು ಅಲಕ್ಷ್ಯವಾಗಿ.

ರಂಗಣ್ಣ ಬೆರಗಾಗಿ ಹೋದ. "ಎಲ! ನಾನು ಏಳು ಹುಲ್ಲುಗಾವಲು ತಿರುಗಿ, ಏಳು ಹೊರೆ ಹುಲ್ಲನ್ನು ಹೊತ್ತು ತಂದರೆ, ಅದನ್ನು ಏಳು ದೊಡ್ಡಿಗಳ ದನಗಳು ತಿಂದರೆ, ಏಳೂರಿನ ಜನರು ಅವುಗಳ ಹಾಲನ್ನುಮಾರಿ ಜೀವಿಸುತ್ತಾರಲ್ಲಾ! ಅಂಥಾ ಕಷ್ಟಪಟ್ಟ ನನಗೆ ನನ್ನ ಅತ್ತಿಗೆ ಕುಡಿಯಲಿಕ್ಕೆ ನೀರು ಕೂಡಾ ಕೊಡದೆ ಛೀ, ಎಂದಳಲ್ಲ?" ಎಂದು ಕೊಳ್ಳುತ್ತಾ ತನ್ನಷ್ಟಕ್ಕೆ ತಾನೇ ನೀರು ಮುಳುಗಿಸಿ ಕುಡಿದು, ನಡೆಯುತ್ತಾ ಇದ್ದ ಕಾಲು ಒಯ್ದತ್ತ!

ಸ್ವಲ್ಪದೂರ ಹೋಗುವಾಗ ಒಬ್ಬ ರೈತನು ಕಾಲನ್ನು ನೇಗಿಲ ಮೇಲೆಯೂ, ತಲೆಯನ್ನು ಹೆಗಲಮೇಲೆಯೂ ಇರಿಸಿಕೊಂಡು ನಗುತ್ತಾ ಅಲಕ್ಷ್ಯವಾಗಿ ಗದ್ದೆಯುಳುತ್ತಿದ್ದ.

ಅದನ್ನು ನೋಡಿ ರಂಗಣ್ಣ—"ಏನೋ ರೈತಾ, ನಾನು ಹೋಗುವುದು ನಿನಗೂ ಆಶ್ಚರ್ಯವಾಗಿದೆಯೆ?" ಎಂದ.

"ನೀನು ಹೋದರೆ ನನಗೇನಯ್ಯಾ?" ಎಂದನು ಆ ರೈತ.

ಎಂ. ರಮಾಬಾಯಿ, ಮದಿಹಾಳ

" ಹಾಗಾದರೆ ನೀನೇಕೆ ನಗುತ್ತಿ?" ಎಂದು ರಂಗಣ್ಣ ಕೇಳಿದ.

" ಆ! ಅದೇನಿಲ್ಲ. ಇಲ್ಲಿ ಮೂವತ್ತು ಗಾವುದ ದೂರದಲ್ಲಿ ಹಂಪೀದೇವಾಲಯದ ಎದುರು ಬೈಲಾಟ ಆಡ್ತಾ ಇದ್ದಾರೆ. ಅದರ ಹಾಸ್ಯವನ್ನು ನೋಡಿ ನಗುತ್ತಿದ್ದೇನೆ" ಎಂದ.

" ಹಾಗಾದರೆ ನೀನು ಬಹಳ ದೊಡ್ಡವನೇ ಸರಿ!" ಎಂದನು ರಂಗಣ್ಣ.

ಅದಕ್ಕೆ ಆ ರೈತ—" ನಾನೇನು ದೊಡ್ಡವ? ಸರಸಗಾರ ಸಂಗಣ್ಣನ ತಮ್ಮ ರಂಗಣ್ಣನೇ ಬಹಳ ದೊಡ್ಡವನಂತೆ!" ಎಂದನು.

" ಅರರೆ! ನಿನ್ನ ಬಾಯಿಗೆ ಸಕ್ರೇ ಬೀಳ! ಆ ಸರಸಗಾರ ಸಂಗಣ್ಣನ ತಮ್ಮ ರಂಗಣ್ಣ ನಾನೇಕಣೋ!" ಎಂದ ರಂಗಣ್ಣ.

" ಹಾಗಾದರೆ ನಾನೂ ನಿನ್ನ ಹಿಂದೆ ಬರ್ತೇನೆ" ಎಂದಂದು ಆ ರೈತನು ರಂಗಣ್ಣನ ಹಿಂದೆ ಹೊರಟನು.

ಮುಂದೆ ಕೊಂಚದೂರ ಹೋಗಲು, ಒಬ್ಬ ಕೆಲಸಿಗ ಹುಡುಗ ಕಣ್ಣಿಗೆಬಿದ್ದ. ಅವನು ಕಾಶೀ ತೀರ್ಥವನ್ನು ರಾಮೇಶ್ವರಕ್ಕೂ, ರಾಮೇಶ್ವರ ತೀರ್ಥವನ್ನು ಕಾಶಿಗೂ, ನಿದ್ದೆಮಾಡದೆ ಸಾಗಿಸು ತ್ತಿದ್ದ.

ರಂಗಣ್ಣ ಆ ಹುಡುಗನನ್ನು ನೋಡಿದ. ಅವನ ಅದ್ಭುತವಾದ ಕೆಲಸವನ್ನೂ ನೋಡಿದ. ನೋಡಿ—" ನೀನು ಬಹಳ ದೊಡ್ಡವನೇಸರಿ!" ಎಂದ.

ಅದಕ್ಕೆ ಆ ಹುಡುಗ-" ನಾನೇನು ದೊಡ್ಡವ? ಎಲ್ಲಿಯೋ ಸರಸಗಾರಸಂಗಣ್ಣನತಮ್ಮ ರಂಗಣ್ಣ



ಬಹಳ ದೊಡ್ಡವನೆಂದು ಎಲ್ಲರೂ ಹೇಳು ತ್ತಾರೆ" ಎಂದ.

" ಆ ರಂಗಣ್ಣ ನಾನೇಕಣೋ!" ಎಂದು ರಂಗಣ್ಣ ಹೇಳುತ್ತಲೇ, ಆ ಕೆಲಸಿಗ ಹುಡು ಗನೂ ರಂಗಣ್ಣನ ಹಿಂದೆ ಹೊರಟ. ಹೀಗೆ ಮೂವರೂ ಹೋಗುತ್ತಿದ್ದಾರೆ. ಹೋಗು ತ್ತಿದ್ದಾಗ ಒಬ್ಬ ಕೊರವಹುಡುಗ ನಗುತ್ತಾ ಇರುವುದನ್ನು ನೋಡಿದರು.

" ಏನೋ ನಗುತ್ತಿ? ನಾವು ಹೋಗುವುದು ನಿನಗೂ ಆಶ್ಚರ್ಯವಾಗಿದೆಯೇ?" ಎಂದು ರಂಗಣ್ಣ ಕೇಳಿದ.

ಅದಕ್ಕೆ ಆ ಕೊರವ ಹುಡುಗ—" ನೀವು ಹೋದರೆ ನನಗೇನು?" ಎಂದ.

" ಹಾಗಾದರೆ ಮತ್ತೇಕೆ ನಗುತ್ತಿ?" ಎಂದು ರಂಗಣ್ಣ ಪುನಃ ಕೇಳಿದ.





"ಏನಿಲ್ಲ. ನಾನು ಏಳು ತಿಂಗಳ ಕೆಳಗೆ ಬಿಟ್ಟ ಬಾಣ ಈಗ ಒಂದು ಹಕ್ಕಿಯನ್ನ ಕೊಂದು ತರುತ್ತಾ ಇದೆ" ಎಂದ.

"ಹಾಗಾದರೆ ನೀನು ಬಹಳ ದೊಡ್ಡವನೇ ಸರಿ!" ಎಂದನು ರಂಗಣ್ಣ.

ಆಗ ಆ ಹುಡುಗ—"ನಾನೇನು ದೊಡ್ಡವ? ಎಲ್ಲಿಯೋ ಸರಸಗಾರ ಸಂಗಣ್ಣನ ತಮ್ಮ ರಂಗಣ್ಣ ಇದ್ದಾನಂತೆ; ಅವನು ಬಹಳ ದೊಡ್ಡವನಂತೆ!" ಎಂದ.

"ಆ ರಂಗಣ್ಣ ನಾನೇಕಣೋ!" ಎಂದು ರಂಗಣ್ಣ ಹೇಳುತ್ತಲೇ ಆ ಕೊರವ ಹುಡುಗ ರಂಗಣ್ಣನ ಹಿಂದೆಯೇ ಹೊರಟನು.

ಹೀಗೆ ಆ ನಾಲ್ಕು ಮಂದಿಯೂ ಹೋಗುತ್ತಾ ಹೋಗುತ್ತಾ ಒಬ್ಬ ಅರಸನ ಪಟ್ಟಣವನ್ನು ಸೇರಿದರು. ಅಲ್ಲಿಯ ವಿಶೇಷವೇನೆಂದರೆ:

ಅಲ್ಲಿಯ ಅರಸನ ಬೆನ್ನಿನಲ್ಲಿ ಒಂದು ರಾಜ ಕುರು ಮೂಡಿತ್ತು. "ಇದನ್ನು ಗುಣಪಡಿಸಿದ ವರಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡಿ, ಅರ್ಧ ರಾಜ್ಯಕ್ಕೂ ಪಟ್ಟ ಕಟ್ಟು ತ್ತೇನೆ" ಎಂದು ಅರಸನು ಸಾರಿಸಿದ್ದನು.

ಇದನ್ನು ಕೇಳಿ ನಮ್ಮ ನಾಲ್ವರು ದೊಡ್ಡ ವರೂ ಆಲೋಚನೆ ಮಾಡಿದರು. ಆಲೋ ಚಿಸುವಾಗಲೇ ರಂಗಣ್ಣ ಕೆಲಸಿಗ ಹುಡುಗ ನೊಡನೆ—"ಆಲೋಚನೆ ಏಕೋ ಹುಡುಗಾ, ನೀನು ಕಾಶೀ ತೀರ್ಥವನ್ನು ರಾಮೇಶ್ವರಕ್ಕೂ, ರಾಮೇಶ್ವರ ತೀರ್ಥವನ್ನು ಕಾಶಿಗೂ ಸಾಗಿಸು ವವನಲ್ಲವೆ? ಈಗ ಬೇಗನೇ ಹೋಗಿ ಕಾಶೀ ತೀರ್ಥವನ್ನು ತೆಕ್ಕೊಂಡು ಬಾ" ಎಂದನು.

"ಸರಿ" ಎಂದು ಕೆಲಸಿಗ ಹುಡುಗ ಹೊರಟು ಹೋದ. ಹಾಗು ಅವನು ಕಾಶಿ ಯಿಂದ ನೀರು ತರುತ್ತಾ ಇದ್ದ. ಆದರೆ, ಕಾಶಿ ಹುಟ್ಟಿದಾಗಲೇ ನದಿಯೂ ಹುಟ್ಟಿತ್ತು. ನದಿ ಹುಟ್ಟಿದಾಗಲೇ ಹನ್ನೆರಡು ತಲೆಯ ನಾಗೇಂದ್ರನೂ ಹುಟ್ಟಿದ್ದ. ಆ ನಾಗೇಂದ್ರನು ಕಾಶೀಪಟ್ಟಣಕ್ಕೆ ಕಾವಲು ಕಾಯುತ್ತಿದ್ದ. ಆದು ದರಿಂದ ತೀರ್ಥ ತರುವ ಕೆಲಸಿಗನನ್ನು ಕಚ್ಚ ಬೇಕೆಂದು ಆ ನಾಗೇಂದ್ರನು ಅವನ ಹಿಂದೆಯೆ ಬರುತ್ತಿದ್ದ. ಕೆಲಸಿಗನು ಅದನ್ನು ನೋಡಲೇ ಇಲ್ಲ. ಸ್ವಲ್ಪದೂರ ಬರುವಾಗ, ಆ ಹಾವಿನ ಶ್ವಾಸದಿಂದ ಅವನು ಬಳಲಿಹೋಗಿ ಒಂದು ಮರದ ಬುಡದಲ್ಲಿ ವಿಶ್ರಮಿಸಿದ. ಹಾವು ಅವನ ಬಳಿಗೆ ಬಂದು, ನಿದ್ರಿಸುವವನನ್ನು

ಕಚ್ಚಬಾರದೆಂದುಕೊಂಡು ಅವನ ಸುತ್ತೂ ತಿರುಗುತ್ತಿತ್ತು.

ಇಲ್ಲಿ ಹೀಗಿರುವಾಗ ಅಲ್ಲಿ ಅವರು ಇನ್ನೂ ಕೆಲಸಿಗ ಹುಡುಗ ಬರಲಿಲ್ಲವಲ್ಲಾ!" ಎಂದು ಯೋಚನೆ ಮಾಡುತ್ತಿದ್ದರು.

ಆಗ ರಂಗಣ್ಣ—"ಅಯ್ಯಾ, ರೈತ, ನೀನು ಮೂವತ್ತುಗಾವುದ ದೂರದಲ್ಲಿರುವ ಬೈಲಾಟವನ್ನು ನೋಡಿ ಆನಂದಿಸಿದ ದೊಡ್ಡೋನಾಗಿರುವಿಯಲ್ಲಾ? ಈಗ ನಮ್ಮ ಕೆಲಸಿಗ ಹುಡುಗ ಎಲ್ಲಿದ್ದಾನೋ ನೋಡು" ಎಂದು ಹೇಳಿದ.

ರೈತನು ಹಾಗೆಯೇ ನೋಡಿ—"ಇನ್ನೇನಿದೆ! ಆ ಕೆಲಸಿಗ ಹುಡುಗ ನಿದ್ರೆ ಮಾಡುತ್ತಿದ್ದಾನೆ. ಅವನ ಹತ್ತಿರ ಹನ್ನೆರಡು ತಲೆಯ ನಾಗೇಂದ್ರ ಏಳುತ್ತಲೇ ಅವನನ್ನು ಕಚ್ಚಲಿಕ್ಕೆ ಕಾಯುತ್ತಾ ಇದೆ" ಎಂದು ಹೇಳಿದನು.

ಆಗ ರಂಗಣ್ಣ ಕೊರವ ಹುಡುಗನನ್ನು ಕುರಿತು—"ಎಲೋ, ನೀನು ಏಳು ತಿಂಗಳ ಕೆಳಗೆ ಬಿಟ್ಟ ಬಾಣವು ಹಕ್ಕಿಯನ್ನು ಕೊಂದು ತಂದಿತಲ್ಲವೆ? ಈಗ ನೀನು ಆ ಕೆಲಸಿಗ ಹುಡುಗನನ್ನು ಕಚ್ಚಲು ಕಾದಿರುವ ಆ ನಾಗೇಂದ್ರನನ್ನು ಕೊಂದುಹಾಕು" ಎಂದನು. ಕೂಡಲೇ ಆ ಕೊರವ ಹುಡುಗ ಬಾಣ ಬಿಟ್ಟ. ಅದು ನಾಗೇಂದ್ರನನ್ನು ತುಂಡು ತುಂಡು ಮಾಡಿ ಹಾಕಿತು.

ಬಳಿಕ ಕೆಲಸಿಗಹುಡುಗ—"ಅಬ್ಬ! ಎಂಥಾ ನಿದ್ದೆ ನನಗೆ!" ಎನ್ನುತ್ತಾ ಎದ್ದು ಪಕ್ಕದಲ್ಲಿ ನೋಡಿದ. ಹನ್ನೆರಡು ತಲೆಯ ಸರ್ಪವು ತುಂಡು ತುಂಡಾಗಿ ಬಿದ್ದಿತ್ತು.




"ಬದುಕಿದೆ" ಎಂದುಕೊಳ್ಳುತ್ತಾ ಅವನು ತೀರ್ಥದೊಂದಿಗೆ ರಂಗಣ್ಣನಿದ್ದಲ್ಲಿಗೆ ಬಂದು ಸೇರಿದ. ಅನಂತರ ಎಲ್ಲರೂ ಅರಸನ ಬಳಿಗೆ ಹೊರಟರು. ಕೆಲಸಿಗನು ಅರಸನ ಹುಣ್ಣಿನ ಮೇಲೆ ಮೂರು ಸಾರಿ ತೀರ್ಥವನ್ನು ಹಾಕಿ ತೊಳೆದನು. ಹುಣ್ಣು ಗುಣವಾಯಿತು.

ರಾಜನು ಅವರ ವಿಚಾರಗಳನ್ನು ಕೇಳಿ—"ಹಾಗಾದರೆ ನೀವು ನಾಲ್ವರಲ್ಲಿ ಯಾರು ನನ್ನ ಮಗಳನ್ನು ಮದುವೆಮಾಡಿಕೊಳ್ಳುತ್ತೀರಿ?" ಎಂದು ಕೇಳಿದನು.

ಅದಕ್ಕೆ ಕೊರವಹುಡುಗ—"ಓ ದೊರೆಯೆ! ನಮಗೆಲ್ಲರಿಗಿಂತಲೂ ಸರಸಗಾರಸಂಗಣ್ಣನ ತಮ್ಮ ರಂಗಣ್ಣನೇ ದೊಡ್ಡವ. ಅವನಿಗೆ ಕೊಟ್ಟು ಮದುವೆಮಾಡಿರಿ" ಎಂದನು.

ರಂಗಣ್ಣನಿಗೂ ರಾಜಕುಮಾರಿಗೂ ಮಹಾ ವೈಭವದಿಂದ ಮದುವೆಯಾಗಿಹೋಯಿತು.

ಮತ್ತೆ ಕೆಲವು ದಿನಗಳಮೇಲೆ, ಸ್ನೇಹಿತರು ಮೂವರಿಗೂ ರಂಗಣ್ಣನೇ ಪ್ರಯತ್ನ ಪಟ್ಟು ಮದುವೆ ಮಾಡಿಸಿದ. ತರುವಾಯ ಅವರೆಲ್ಲಾ ದೊರೆಯನ್ನು ಕುರಿತು—"ರಾಜಾ! ನಾವೆಲ್ಲಾ ನಮ್ಮ ನಮ್ಮ ಮನೆಗೆ ಹೋಗುತ್ತೇವೆ" ಎಂದರು.

ರಾಜನು "ಆಗಬಹುದು" ಎಂದ.

ರಂಗಣ್ಣ ಒಂದು ಸೋರೆಕಾಯಿಯನ್ನು ತಂದನು. ಅದರೊಳಗೆ, ಬಂಡಿಗಳನ್ನೂ ಎತ್ತುಗಳನ್ನೂ ಹೊಗಿಸಿದರು. ಸಾಮಾನುಗಳನ್ನೆಲ್ಲ ತುಂಬಿಸಿದರು. ತಮ್ಮ ತಮ್ಮ ಹೆಂಡತಿಯರೊಂದಿಗೆ ತಾವೂ ಅದರೊಳಗೆ ಸೇರಿಕೊಂಡರು.

ಬಳಿಕ—"ರಾಜಾ, ಈ ಸೋರೆಕಾಯಿಯೊಳಗೆ ನೀರು ಬಾರದಂತೆ ಬಂದು ಮಾಡಿ, ಸಮುದ್ರದಲ್ಲಿ ಬಿಟ್ಟು ಬಿಡಿ" ಎಂದರು. ರಾಜನು ಹಾಗೇ ಮಾಡಿದನು.

ಆ ಸೋರೇಕಾಯಿ ಸಮುದ್ರದಲ್ಲಿ ಹೋಗುತ್ತಾ ಇರುವಾಗ, ಅದನ್ನೊಂದು ಮೀನು ನುಂಗಿಬಿಟ್ಟಿತು. ಆ ಮೀನು ಹಾಗೇ ಹೋಗುವಾಗ ಅದನ್ನೊಂದು ಕೊಕ್ಕರೆ ನುಂಗಿಬಿಟ್ಟಿತು. ನುಂಗಿ ಹಾರಿ ಆ ಕೊಕ್ಕರೆ ಒಂದು ನದಿಯ ಬದಿಯ ಮರದ ಕೊಂಬೆಯ ಮೇಲೆ ಕುಳಿತುಕೊಂಡಿತು.

ಆಗ ಸರಸಗಾರ ಸಂಗಣ್ಣನ ಹೆಂಡತಿ ನೀರಿಗಾಗಿ ನದಿಗೆ ಬಂದಳು. ನೀರು ತುಂಬಿಸಿಕೊಂಡು ಹೋಗುವಾಗ, ಅವಳು ಆ ಮರದ ಕೊಂಬೆಯಲ್ಲಿದ್ದ ಕೊಕ್ಕರೆಯನ್ನು ಒಂದು ಕೈಯಿಂದ ಹಿಡಿದೆಳೆದುಕೊಂಡು, ಮನೆಗೆ ಒಯ್ದಳು. ಅವಳ ಮುಷ್ಟಿಯಲ್ಲಿ ಆ ಕೊಕ್ಕರೆ ಸತ್ತಿತು. ಅವಳು ಅದನ್ನು ಕೊಯ್ದಳು. ಅದರ ಹೊಟ್ಟೆಯೊಳಗೆ ಮೀನು ಸಿಕ್ಕಿತು. ಆ ಮೀನನ್ನು ಕೊಯ್ದಳು. ಅದರೊಳಗೆ ಸೋರೇಕಾಯಿ ಸಿಕ್ಕಿತು. ಅದನ್ನು ಒಡೆದಳು.

ಕೂಡಲೇ ಅದರೊಳಗೆ ಇದ್ದವರೆಲ್ಲಾ ದಬದಬನೆ ಹೊರಗೆ ಬಂದರು.

ಆಗ ರಂಗಣ್ಣ ಅತ್ತಿಗೆಯನ್ನು ನೋಡಿ ನಾಚಿಗೆಯಿಂದ—"ಅತ್ತಿಗೆ, ನೀನೇ ಬಹಳ ದೊಡ್ಡೋಳು. ನಾನೇನು ದೊಡ್ಡವ?" ಎನ್ನುತ್ತ ತಲೆ ಬಗ್ಗಿಸಿ ನಿಂತನು.






## ನಗೆಹನಿ

"ಅಯ್ಯೋ! ಅವರು ಭಾಳ ದೊಡ್ಡ ಮನುಷ್ಯ. ಯಾರಿಗೂ ತಲೆ ಬಾಗೋದಿಲ್ಲ."
"ಹಾಗಾದ್ರೆ ಕ್ಷೌರಾನೇ ಮಾಡಾಕಿಲ್ಲೇನವ್ರು?"

*   *   *

ಭಾಷಣಕಾರ:—"ಕಾಫಿ, ಮೊದಲಾದುವೆಲ್ಲಾ ಬಹಳ ಕೆಟ್ಟದು. ಬಾಯಾರಿಕೆಗೆ ನೀರೇ ಸರ್ವಶ್ರೇಷ್ಠ...." ಎಂದು ಭಾಷಣ ಮಾಡಿ, "ನಾನು ಹೇಳಿದಂತೆ ನೀವು ಆಚರಿಸಬೇಕೇ ಹೊರತು, ನಾನು ಮಾಡುವಂತೆ ನೀವು ಮಾಡಬೇಡಿ...." ಎಂದು ಮುಗಿಸಿ—"ಎಲ್ಲಿ, ಕಾಫೀ ಇತ್ತ ಕೊಡಿ. ಗಂಟಲು ಒಣಗಿದೆ" ಎಂದನು. ಎಲ್ಲರೂ ಚಪ್ಪಾಳೆ ತಟ್ಟುವಾಗ ಭಾಷಣಕಾರ ಕಾಫೀ ಕುಡಿಯುತ್ತಿದ್ದ.

ಕೆ. ದಾಸಶೆಟ್ಟಿ.

*   *   *

"ಯಾಕೋ ಚಿವುಟುತ್ತಿ? ಬೆನ್ನಿಗೆ?"
"ತಿಗಣೆ ಕಚ್ಚಿದ್ದೋ ಅದು!"

*   *   *

ಗಟ್ಟಿಯಾಗಿ:—ಲೋ, ನಾನು ಹತ್ತು ಸಾರಿ ಕರೆದರೂ ಓ ಕೊಡಲಿಲ್ಲ ಯಾಕೋ?
ಹೊಸ ಸೇವಕ:—ನಾನು ಹತ್ತು ಸಾರಿ ಓ ಕೊಟ್ಟಿದ್ದೇನೆ ಬುದ್ಧಿ.

ಎನ್. ಎಸ್. ಕಂದ, ಉರ್ವಾಲ್

## ಚುಟುಕ

ನಮ್ಮ ಡ್ರ್ಯಾವರ್ ಪಿಟ್ಟು
ಕಾರು ಜೋರು ಬಿಟ್ಟು
ಮರವು ತಾಗಿ ಉರುಳಿ ಹೋಗಿ
ಆಯ್ತು ಅವಗೆ ಪೆಟ್ಟು.
ಒಳಗೆ ಇದ್ದ ಮಂದಿಯೆಲ್ಲ
ನಜ್ಜುಗುಜ್ಜು ಒಟ್ಟು.

ಕಿಟ್ಟುಬಹಳ ಪುಟ್ಟ
ಅವನ ಆಟ 'ಸಟ್ಟಾ'
ಸಟ್ಟಾ ಆಡಿ, ಕೆಟ್ಟು ಓಡಿ
ಗಟ್ಟ ಹತ್ತಿ ಬಿಟ್ಟ!

—ರಘುನಾಥಪ್ರಭು, ಕೋಟ

*   *   *

ಆಯಿತು ಶಾಲೆಯ ಗಣಗಣ ಗಂಟೆ!
ಶಾಲೆಗೆ ಹೋಗಲು ರಾಮನ ತಂಟೆ!
ಅವ್ವನು ಕೊಟ್ಟಳು ಒಂದೇ ದೋಸೆ
ಸಾಲದು ಎಂದೇ—ರಾಮನ ಆಸೆ
ರಾಮನು ಶಾಲೆಗೆ ಲೇಟು—
ಪಾಠವು ನಾಮ—ಗೋಟು!

ಗುಂಡ ಭಾರಿ ಬಂಟ
ಅವನ ಗೆಳೆಯ ತುಂಟ
ಬಂಟ ತುಂಟ ಕೂಡಿಕೊಂಡು
ಕದ್ದರೊಂದು ಗಂಟ
ಹಿಡಿದಾ ಪೋಲೀಸ್ ನೆಂಟ!

—ದೇವದಾಸ ಚೇಂಕರ, ಅಂಕೋಲ

## — ಜಾಣ್ಮೆ —

1. ಎಂಟು ನಾಣ್ಯಗಳನ್ನು ತೆಗೆದುಕೊಂಡು, ಏನೂ ಕೂಡಿಸದೆ ಅವುಗಳನ್ನು ಹತ್ತು ಮಾಡಬೇಕು. ಸಾಧ್ಯವೇ?

2. ಒಂದೊಂದು ಬದಿಯಲ್ಲಿ ಮೂರು ಮೂರು ಬೆಂಕಿಕಡ್ಡಿಗಳಂತೆ ಒಂದು ಚದರ ಮಾಡಿ, ಮತ್ತೆ ಏಳು ಕಡ್ಡಿಗಳಿಂದ ಅದರಲ್ಲಿ ಸರಿ ಸಮವಾದ ಮೂರು ಕೋಣೆಗಳು ಬರುವಂತೆ ಮಾಡಬೇಕು. ಆ ಮೂರು ಕೋಣೆಗಳೂ ಒಂದೊಂದು ಬೆಂಕಿಕಡ್ಡಿಗಳಿಂದ, ಮುಮ್ಮೂರಾಗಿ ವಿಭಾಗಿಸುವಂತಿರಬೇಕು.

3. ತುಂಬಾ ತೂತುಗಳಿವೆ. ತುಂಬಾ ನೀರು ಹಿಡಿಯುತ್ತದೆ. ಏನು?

4. "ಒಂದು ಗಡಿಯಾರವು ಎರಡು ವರ್ಷಕ್ಕೊಮ್ಮೆ ಸರಿಯಾದ ಟೈಂ ತೋರಿಸುತ್ತೆ. ಇನ್ನೊಂದು ದಿನಕ್ಕೆ ಎರಡು ಸಾರಿ ಸರಿಯಾದ ಟೈಂ ತೋರಿಸುತ್ತದೆ. ನಿಮಗೆ ಯಾವುದು ಬೇಕು ಮಾವಾ?" ಎಂದು ಕೇಳಿದೆ. ಅದಕ್ಕೆ ಮಾವ, "ನನಗೆ ಮೊದಲಿನದೇ ಬೇಕು" ಎಂದರು. ಅದೇಕೆಂದು ಹೇಳಿ ನೋಡುವಾ.

5. ಒಬ್ಬ ಒಂದು ಷಾಪಿಗೆ ದಿನಾ ಹೋಗುತ್ತಾನೆ. ಇನ್ನೊಬ್ಬ ದಿನಬಿಟ್ಟು ದಿನ ಅದೇ ಷಾಪಿಗೆ ಹೋಗುತ್ತಾನೆ. ಮತ್ತೊಬ್ಬ ಮೂರು ದಿನಕ್ಕೊಮ್ಮೆ, ಮಗದೊಬ್ಬ, ನಾಲ್ಕು, ಐದು, ಆರು, ಏಳು ದಿನಗಳಿಗೊಮ್ಮೆ ಒಬ್ಬೊಬ್ಬರಂತೆ ಹೋಗುತ್ತಾರೆ, ಇವರೆಲ್ಲಾ ಒಟ್ಟಿಗೆ ಸೇರಿದ ದಿನ ಎಲ್ಲರೊಟ್ಟಿಗೆ ಬಳಿಯಲ್ಲಿರುವ ಹೋಟಲ್ಲಿಗೆ ಹೋಗುತ್ತಾರೆ. ಆ ಒಟ್ಟು ಸೇರುವ ದಿನಯಾವಾಗ?

(ಉತ್ತರಕ್ಕೆ ೫೪ನೇ ಪುಟನೋಡಿ)

## ನಿಮಗೆ ಗೊತ್ತೆ?

ಪ್ರಪಂಚದಲ್ಲಿಯೇ ದೊಡ್ಡದೂ ಅಪೂರ್ವವೂ ಆದ ಪುಷ್ಪವು ಸುಮಾತ್ರ ದ್ವೀಪದ ಅಡವೀ ಪ್ರಾಂತದಲ್ಲಿದೆ. ಅದರ ಅಗಲ ಒಂದು ಗಜ. ನಡುಭಾಗವು ಪಾತ್ರದಂತಿದೆ. ಅದರಲ್ಲಿ ಒಂದೂವರೆ ಗ್ಯಾಲನ್ ನೀರು ಹಿಡಿಯುತ್ತದೆ. ಹೂವಿನ ಬಣ್ಣ ಅರಸಿನ.

ಅದರಲ್ಲಿರುವ ಚುಕ್ಕೆಗಳಲ್ಲಿ ಬಿಳಿ ಅಥವಾ ಬಿಳಿ ಮಿಶ್ರ ನೇರಳೇ ಬಣ್ಣವಿದೆ. ಒಂದೊಂದು ದಳವು ಕಾಲು ಇಂಚು ದಪ್ಪ. ಇದರಭಾರವು ಹದಿನೈದು ಪೌಂಡು ಇರುವುದರಿಂದ ಸುಲಭದಲ್ಲಿ ಕೀಳಲಿಕ್ಕೆ ನಿಮ್ಮಿಂದಾಗದು. ಈ ಹೂವಿನ ಹೆಸರು "ರಫ್ಲೇಷಿಯಾ" ಆಶ್ಚರ್ಯವೇನೆಂದರೆ, ಈ ಹೂವಿನ ಗಿಡಕ್ಕೆ ಎಲೆಗಳೇ! ಇರುವುದಿಲ್ಲ.

ಇದು ನಮ್ಮೂರ ಬನ್ನಣಿಕೆಯಂತೆ ಆಶ್ರಯಜೀವಿಯಾದ ಗಿಡ. ಅಂದರೆ ಇನ್ನೊಂದು ವೃಕ್ಷವನ್ನಾಶ್ರಯಿಸಿ ಬಾಳುವಂಥಾದ್ದು. ಅಂದರೆ, ಅಡವಿಯ ದೊಡ್ಡ ಮರದ ಬೇರಿನಲ್ಲಿ ಇದು ಹುಟ್ಟಿ ಬೆಳೆಯುತ್ತದೆ. ಇದರ ಬೀಜದ ಬಣ್ಣ ಅಚ್ಚ ಬಿಳಿ. ಇದನ್ನು ಸನ್ 1818 ರಲ್ಲಿ 'ಸ್ಟಾಫೋರ್ಡ್‌ರಾಫಲ್ಸ್' ಎಂಬುವನು ಕಂಡುಹಿಡಿದನು.



# ಜುಟ್ಟು ಕೈಯೊಳಗೆ

ತಿಮ್ಮಣ್ಣನವರೆಂದರೆ ಈಗ ತಾಳೀಕೆರೆಯೂರಿನಲ್ಲಿ ಭಾರೀ ದೊಡ್ಡ ಶ್ರೀಮಂತರು. ಮೊದಲು ಕುಡುಕ ತಿಮ್ಮಣ್ಣನಾಗಿದ್ದವನು ಈಗ 'ಶ್ರೀಮಂತ ಸಾವುಕಾರ ತಿಮ್ಮಣ್ಣನವರು' ಆಗಿದ್ದಾರೆ! ಅದು ಹೇಗೆಂದು ಅವರೇ ಒಮ್ಮೆ ಹೇಳಿದಾಗ ನಮಗೆ ಗೊತ್ತಾಯಿತು. ಆ ಕತೆ ಹೀಗೆ:—

ತಿಮ್ಮ, ಬರೀ ತಿರುಗಾಟದ ತಿಮ್ಮ. ಸಿಕ್ಕಿದಲ್ಲಿ ಹೆಂಡ ಕುಡಿಯುತ್ತಿದ್ದ; ಸಿಕ್ಕಿದಲ್ಲಿ ತೀನಿ ತಿಂದು, ಸಿಕ್ಕಿದಲ್ಲಿ ಬಿದ್ದು, ಕಾಲು ಒಯ್ದತ್ತ ಅಲೆಯುತ್ತಿದ್ದ. ಬೆಳಗಾದರೆ ಅವನಿಗಿರುವ ಧ್ಯಾನವೆಲ್ಲಾ ಬರೀ ಹೆಂಡದ್ದೇ.

ಈ ದಿನ ಹೆಂಡಕ್ಕೇನು ಗತಿ? ಯಾವ ತಾಳೀ ಮರಕ್ಕೆ ಹತ್ತಲಿ? ಎಂದೇ ಯೋಚನೆ. ಬುದ್ಧಿ ತಿಳಿದಂದಿನಿಂದ ತಿಮ್ಮನ ಜೀವನ ಹಾಗೇ ಹೋಗುತ್ತಿತ್ತು. ಮುದುವೆ-ಮಂಗಳ ಒಂದೂ ಅವನಿಗೆ ಆಗಿಯೇ ಇಲ್ಲ.

ಕತ್ತಲಾಗುವುದೇ ತಡ. ಯಾರೂ ಕಾಣದಂತೆ ಯಾವ ತಾಳೀ ಮರಕ್ಕಾದರೂ ಹತ್ತಿ, ಅಲ್ಲಿ ತುಂಬಿಕೊಂಡಿದ್ದ ಹೆಂಡದ ಮೊಗೆಯನ್ನಿಳಿಸಿಕೊಂಡು ಯಾವುದೋ ಮೂಲೆಗೆ ಹೋಗಿ ಹೀರಿಬಿಡುತ್ತಿದ್ದ. ಬಳಿಕ ಅಲ್ಲೇ ಅರೆ ಬೋದದಿಂದ ಬಿದ್ದದ್ದು ತೂಗಾಡುತ್ತಾ ಎಲ್ಲಿಗಾದರೂ ಹೋಗುತ್ತಿದ್ದ. ಅವನ ಸ್ವಂತ ಗುಡಿಸಲಿನಲ್ಲಿ ಅವನು ಇರುವುದೇ ಅಪರೂಪ.

ಒಂದು ದಿನ ಅವನು ದೊಡ್ಡ ಪೇಚಾಟದಲ್ಲಿ ಸಿಕ್ಕಬೇಕಾಯಿತು. ಕತ್ತಲಾಗುವಾಗಲೇ ಒಂದು ತಾಳೇ ಮರವನ್ನೇರಿ, ಹೆಂಡದ ಗಡಿಗೆಯೊಂದಿಗೆ ಕೆಳಗಿಳಿದಾಗ, ಆ ಮರದ ಯಜಮಾನ ನೋಡಿಬಿಟ್ಟ. ತಿಮ್ಮ ಓಡಿದ; ಅವನೂ ದೊಣ್ಣೆಯೊಂದಿಗೆ ಬೆನ್ನು ಹತ್ತಿದ.

ತಿಮ್ಮನು "ಬದುಕು ಜೀವವೇ" ಎಂದುಕೊಳ್ಳುತ್ತಾ, ಹಿಂದೆ ನೋಡದೆ ಕಾಲು ಒಯ್ದತ್ತ ಓಡಿದ. ಗಡಿಬಿಡಿಯಲ್ಲಿ ಎತ್ತ ಓಡುವೆನೆಂಬ ಎಚ್ಚರವೇ ಅವನಿಗಿಲ್ಲ.

ಸುತ್ತೂ ಕಾಡಿಗೆಯ ಕತ್ತಲೆ. ಓಡಿ ಓಡಿ ಸಾಕಾಗಿ, ಒಂದೆಡೆಯಲ್ಲಿ ಕುಳಿತು ಸುತ್ತಲೂ ನೋಡಿದ. ಅವನ ಎದೆಯೇ ನಿಂತು ಹೋಗು

ಪಿ. ವಿ. ಭಟ್ಟ, ಕೃಷ್ಣಾಪುರ



ವಂತಾಯಿತು! ಹಾಳು ಬಿದ್ದ 'ಪರಿಶೇಹಾಳಿಗೇ' ಬಂದು ಕುಳಿತಿದ್ದಾನೆ!

'ಪರಿಶೇಹಾಳು' ಎಂಬ ಹೆಸರು ಕೇಳಿದರೇ ಸಾಕು; ಸುತ್ತು ಮುತ್ತೂ ಕೆಲವು ಹರದಾರಿ ದೂರದ ಊರಿನವರೆಲ್ಲಾ ಗಡಗಡ ನಡುಗುತ್ತಿದ್ದರು. ಕೆಲವು ಶತಮಾನಗಳಿಂದ ಪಾಳು ಬಿದ್ದ ಆ ಶಿಥಿಲ ಸ್ಥಳದಲ್ಲಿ ಹಗಲು ಹಾಡೇ ದೆವ್ವಗಳೂ ಭೂತಗಳೂ ಕುಸ್ತಿ ಹಿಡಿದು ಹೋರಾಡುತ್ತಿರುವುವೆಂದು ಎಲ್ಲರೂ ನಂಬುತ್ತಿದ್ದರು. ಆದ್ದರಿಂದ ಹಗಲಿಗಾದರೂ ಯಾರೂ ಆ ಕಡೆ ಸುಳಿಯರು. ಇನ್ನು ರಾತ್ರಿಯಲ್ಲಿ ಯಾರಾದರೂ ಅಪ್ಪೀತಪ್ಪೀ ಅಲ್ಲಿಗೆ ಕಾಲಿಟ್ಟರೆ, ಬೆಳಗಾಗುವಷ್ಟರಲ್ಲಿ ಮೈಪೂರಾ ಗುದ್ದುಂಡು "ಅಯ್ಯೋ! ಅಮ್ಮೋ!" ಎಂದು ಹೊರಳಿ ಹೊರಳಿ ಸಾಯಬೇಕಾದ್ದೇ!

ಪಾಪ, ಹೆಂಡಕುಡುಕ ತಿಮ್ಮ ಭೀತಿಯ ಗಡಿಬಿಡಿಯಲ್ಲಿ ಕತ್ತಲೆಯಿಂದ ಬೇರೆ ದಾರಿ ತಿಳಿಯದೆ ಆ ಪ್ರದೇಶದ ನಟ್ಟನಡುವಿಗೇ ಬಂದುಬಿಟ್ಟಿದ್ದ. ಇನ್ನೇನು ಮಾಡುವುದು? ಕೊಂಚ ಕೊಂಚವಾಗಿ ಧೈರ್ಯ ತಂದುಕೊಂಡು ಸುತ್ತೂ ಇನ್ನೊಮ್ಮೆ ಕಣ್ಣಿಟ್ಟು ನೋಡಿದ. ಯಾವ ದೆವ್ವ ಭೂತಗಳೂ ಕಂಡುಬರಲಿಲ್ಲ.

ಕೈಯಲ್ಲಿ ಗಟ್ಟಿಯಾಗಿ ಹಿಡಿದಿರುವ ಹೆಂಡದ ಕುಡಿಕೆಯನ್ನು ನೋಡಿ ಇನ್ನಷ್ಟು ಧೈರ್ಯ ಬಂತು. "ಸ್ವಲ್ಪ ಕುಡಿದುಬಿಟ್ಟರೆ ಇನ್ನೂ ಧೈರ್ಯ ಬಂದೀತು. ಆಮೇಲೆ ಇಲ್ಲಿಂದ ಓಡಿ ಹೋಗಬಹುದು" ಎಂದುಕೊಂಡು ಕುಡಿಯಲಾರಂಭಿಸಿದನು. ಅರ್ಧ ಗಡಿಗೆ ಖಾಲಿಯಾಯಿತು; ತಾನು ಯಾರು? ಎಲ್ಲಿ ಇರುವೆ, ಎಂಬ ಸಂಗತಿ ಕೂಡಾ ಮರೆಯ ತೊಡಗಿತು. ಮತ್ತು ಪೂರ್ತಿಯಾಗಿ ಏರಿಕೊಂಡಿತು.

ಅರ್ಧ ಬಿದ್ದುಹೋದ ಗೋಡೆಯ ಮರೆಯಿಂದ ಇದನ್ನೆಲ್ಲಾ ನೋಡುತ್ತಾ, ಆ ಪಾಳಿನ ಹಿರೇ ಭೂತವು ನಿಂತಿತ್ತು! "ಒಳ್ಳೇ ಸಮಯ!" ಎನ್ನುತ್ತಾ, ಅದು ತಿಮ್ಮನ ಮುಂದೆ ಬಂದು ನಿಂತಿತು!

ಮತ್ತೇರಿದ ತಿಮ್ಮ ಆ ಭೂತವನ್ನು ನೋಡುತ್ತಾ—"ಯಾರೋಯ್? ಹಾಂ!" ಎಂದು ಗದರಿಸಿ ಕೇಳಿದ.

ಭೂತ "ಖೊಕ್ಕೆ"ಂದು ನಕ್ಕು—"ನಾನೋ? ಈ ಪರಿಶೇಹಾಳಿನ ಹೆಬ್ಭೂತ ನಾನು! ನನ್ನೊ

ಡನೆ ಕುಸ್ತೀಹಿಡಿ ನೋಡುವಾ!" ಎಂದಿತು ತೋಳು ತಟ್ಟುತ್ತಾ.

ರೋಷವೇರಿತು ತಿಮ್ಮಯ್ಯನಿಗೆ! ಭೂತದ ಕಡೆಗೆ ದುರುದುರು ನೋಡಿದ. ಆದರೆ ಆ ಭೂತವು ಭೂತದಂತೆ ಕಾಣಲಿಲ್ಲ. ಪಂಡಿತರ ಶಾಲುವೆಯನ್ನು ಹೊದ್ದುಕೊಂಡಿತ್ತು. ಕಾಲಿನಲ್ಲಿ ಹಾವುಗೆ; ಕಿವಿಯಲ್ಲಿ ಕುಂಡಲಗಳು; ಕೈಯಲ್ಲಿ ಕಂಕಣಗಳು. ಹೀಗೆ ಪಕ್ಕಾ ಪಂಡಿತ ಬ್ರಾಹ್ಮಣನಾಗಿ ಕಾಣುತ್ತಿತ್ತು ಆ ಭೂತ!

"ಕುಸ್ತೀ? ಹೆಃ! ಬಾ!" ಎನ್ನುತ್ತಾ ಎದ್ದನು ತಿಮ್ಮ. ಯಾರೋ ಮುದಿ ಬ್ರಾಹ್ಮಣ, ಒಂದೇ ಗುದ್ದಿಗೆ ಮಣ್ಣು ಮುಕ್ಕುತ್ತಾನೆಂದು ಅವನ ನಂಬುಗೆ.

ಆದರೆ ಆ ಭೂತವು ಕುಸ್ತಿಯಲ್ಲಿ ಬಹಳ ಪಳಗಿತ್ತು. ಕೆಲವು ನೂರು ವರ್ಷಗಳಿಂದ ಸಂದರ್ಭ ಸಿಕ್ಕಿದಾಗೆಲ್ಲಾ ಯಾರೋ ಒಬ್ಬರೊಂದಿಗೆ ಹೀಗೇ ಸವಾಲು ಹಾಕಿ ಕುಸ್ತೀ ಹಿಡಿದು ಹೊಡೆದು ಹಾಕುತ್ತಿತ್ತು.

ತಿಮ್ಮ ಕುಸ್ತಿಗೆ ನಿಂತೇಬಿಟ್ಟ. ಮರು ಕ್ಷಣದಲ್ಲೇ ಆ ಭೂತವು ಅವನನ್ನು ಮೇಲೆತ್ತಿ ನೆಲಕ್ಕೆ ಹೊಡೆದು ಹಾಕಿತು. ಆ ಪೆಟ್ಟಿಗೆ ತಲೆ ಗಿರ್ರೆಂದು, ಕುಡಿದದ್ದೂ ಕೊಂಚ ಹೊರಗೆ ಬಂತು. ತಿಮ್ಮನಿಗೆ ಮರುಕ್ಷಣದಲ್ಲಿಯೇ ತಾನು ಪರಿಶೀಹಾಳಿನಲ್ಲಿರುವೆನೆಂದೂ ನೆನಪಿಗೆ ಬಂದು ಅವನ ಮೈ ಗಡಗಡನೆ ನಡುಗ ತೊಡಗಿತು. ಬಿದ್ದ ನಾಲಗೆಯಿಂದ ತಡವರಿಸುತ್ತ, "ಓ ಸ್ವಾಮಿಾ! ಭೂತರಾಯಾ! ನನ್ನನ್ನು



ಬಿಡು! ಬದುಕಿದ್ದರೆ ಈ ಕಡೆ ಬರಲಾರೆ!" ಎಂದು ಅಂಗಲಾಚಿದನು.

"ಕುಸ್ತೀಗೆ ಬಾ ಎಂದು ಕರೆದೆಯಲ್ಲಾ! ತೋರಿಸು ನಿನ್ನ ಕುಸ್ತೀನ ಮೊದಲು!" ಎಂದು ಆ ಭೂತವು ಅವನ ಎದೆಯ ಮೇಲೆ ಕುಳಿತುಕೊಂಡು ಕುತ್ತಿಗೆಯನ್ನು ಹಿಸುಕ ತೊಡಗಿತು.

ಮೈಯೆಲ್ಲಾ ಬೆವರಿಹೋಯಿತು ತಿಮ್ಮಯ್ಯನಿಗೆ. ಇನ್ನು ಹೇಗಿದ್ದರೂ ತಾನು ಬದುಕಲಾರೆನೆಂದು ಗೊತ್ತಾಯಿತು. ಅದರಿಂದ ಕಟ್ಟಕಡೆಯ ಸಾಹಸವೊಂದು ಉಂಟಾಯಿತು ಅವನಲ್ಲಿ. ಭೂತದ ತಲೆಯನ್ನು ಗಟ್ಟಿಯಾಗಿ ಹಿಡಿದು ಕೆಳಕ್ಕೆ ಎಳೆದನು.

ಆ ಭೂತಕ್ಕೆ ಸಣ್ಣದಾಗಿ ಒಂದು ಬೆರಳಿನಷ್ಟು ಗಾತ್ರದ್ದುಜುಟ್ಟಿತ್ತು. ತಿಮ್ಮನ ಹಿಡಿ




ಕೆಗೇ ಆ ಜುಟ್ಟು ಸಿಕ್ಕಿತ್ತು. ಅದನ್ನು ಬಿಡಿಸಿಕೊಳ್ಳಲಿಕ್ಕಾಗಿ ಆ ಭೂತವು ತಲೆಯನ್ನು ಆಚೀಚೆ ತಿರುಗಿಸಿಕೊಳ್ಳುತ್ತಿದ್ದಾಗ, ಆ ಜುಟ್ಟು ಬುಡಸಮೇತ ಕಿತ್ತುಕೊಂಡು ತಿಮ್ಮನ ಕೈಯೊಳಗೆ ಸಿಕ್ಕಿಹೋಯಿತು.

"ಅಯ್ಯೊ! ಹೋದೆನೋ! ಹಾಳಾದೆನೋ!" ಎಂದು ಕೂಗುತ್ತಾ ಭೂತವು ತಿಮ್ಮನನ್ನು ಬಿಟ್ಟು ಎದ್ದು ನಿಂತಿತು. "ಬದುಕಿದೆಯಾ ಬಡಜೀವವೇ" ಎನ್ನುತ್ತಾ ತಿಮ್ಮನೂ ಎದ್ದು ನಿಂತನು. ಕಿತ್ತುಬಂದ ಭೂತದ ಜುಟ್ಟು ಇನ್ನೂ ತಿಮ್ಮನ ಹಿಡಿಕೆಯೊಳಗೇ ಇತ್ತು.

"ಹೇ, ಮನುಷ್ಯನೇ, ನನ್ನ ಜುಟ್ಟು ನನಗೆ ಕೊಟ್ಟುಬಿಡು. ನಿನ್ನನ್ನು ಏನೂ ಮಾಡಲಾರೆ" ಎಂದಿತು ಭೂತ. ಭೂತದ ಬೇಡಿಕೆಯ ದನಿಯನ್ನು ಕೇಳಿ ತಿಮ್ಮನಿಗೆ ಎಲ್ಲಿಲ್ಲದ ಧೈರ್ಯ ಬಂದುಬಿಟ್ಟಿತು. "ಉಹುಂ. ಕೊಡಲಾರೆ. ನಿನ್ನ ಗರ್ವ ಮುರೀತೇನೆ ನೋಡು" ಎಂದು ಜೋರಾಗಿ ಹೇಳಿದನು ತಿಮ್ಮ. ಭೂತವು ಹಿಂದೆ ಹಿಂದೆ ಜರುಗಿ, ಅಳುತ್ತಾ ಹೀಗೆ ಹೇಳಿತು :

"ನಿನ್ನ ಪುಣ್ಯ ಮನುಷ್ಯಾ! ಆ ಜುಟ್ಟು ನಿನಗೆ ಏನೂ ಉಪಯೋಗವಿಲ್ಲ. ಆ ಜುಟ್ಟಿಲ್ಲದೆ ನಾನು ನನ್ನ ಪರಿವಾರ ಭೂತಗಳ ಜತೆಗೆ ಹೋಗುವ ಹಾಗಿಲ್ಲ. ಹೋದರೆ ಕಾಗೆಗಳ ಹಾಗೆ ನನ್ನನ್ನು ಕೆಣಕಿ ಕೊಲ್ಲುವರು. ಅಲ್ಲದೆ ನನ್ನ ಶಕ್ತಿ ಪೂರಾ ಆ ಜುಟ್ಟಿನಲ್ಲೇ ಉಂಟು."

"ಓಹೊ! ಅದೋ ಗುಟ್ಟು! ಮತ್ತೆ ಇಷ್ಟು ಹೊತ್ತೂ ಈ ಗುಟ್ಟು ನನಗೆ ಹೇಳಲೇ ಇಲ್ಲವಲ್ಲಾ!" ಎನ್ನುತ್ತಾ ತಿಮ್ಮನು ಭುಜತಟ್ಟಿ ಅಟ್ಟಹಾಸ ಮಾಡಿ ಆ ಭೂತದ ಭುಜದ ಮೇಲೆ ಹಾರಿ ಕುಳಿತುಕೊಂಡನು. ಜುಟ್ಟು ಮಾತ್ರ ಬಿಟ್ಟುಕೊಡಲಿಲ್ಲ. ಜುಟ್ಟಿಲ್ಲದೆ ಶಕ್ತಿ ಪೂರಾ ಹೋಗಲಾಡಿಸಿಕೊಂಡ ಆ ಭೂತವು, ಆ ಜುಟ್ಟಿಗಾಗಿ ಅಳುತ್ತಾ, ಪರಿಪರಿಯಿಂದ ಅಂಗಲಾಚ ತೊಡಗಿತು.

"ನನ್ನ ಭುಜದ ಮೇಲಿನಿಂದ ಕೆಳಗಿಳಿದು ನನ್ನ ಜುಟ್ಟನ್ನು ನನಗೆ ಕೊಟ್ಟೇ ಅಂದರೆ, ನಿನಗೊಂದು ಬಂಗಾರದ ನಾಣ್ಯದ ಕೊಪ್ಪರಿಗೆ ಕೊಡುತ್ತೇನೆ. ನಿನ್ನ ದಾರಿದ್ರ್ಯವೆಲ್ಲಾ ತೀರಿಹೋಗುತ್ತದೆ" ಎಂದು ಆಶೆ ತೋರಿಸಿತು ಆ ಭೂತ.





ಅದನ್ನು ಕೇಳಿ ಹೆಂಡಕುಡುಕ ತಿಮ್ಮನಿಗೆ ಬಹಳ ಆಶೆಯುಂಟಾದುದು ನಿಜ. ಈ ಅದೃಷ್ಟದಿಂದ ತಾನು ಸುತ್ತುಮುತ್ತಿನ ಗ್ರಾಮುಗಳಲ್ಲೆಲ್ಲಾ ದೊಡ್ಡ ಜಮೀನುದಾರನಾಗಿ ಮೆರೆಯಬಹುದೆಂದು ಯೋಚನೆ ಮಾಡಿದ. ಆದರೆ ಹೆಡ್ಡನಾಗಿ ಆ ಪಂಡಿತ ಭೂತವನ್ನು ಒಮ್ಮೆಲೇ ನಂಬಿಬಿಡಲಿಲ್ಲ.

"ಸರಿ. ಮೊದಲು ಆ ಕೊಪ್ಪರಿಗೆಯನ್ನು ಎತ್ತಿಕೊಂಡು ಬಾ. ಆಮೇಲೆ ನಿನ್ನ ಜುಟ್ಟಿನವಿಷಯ ಯೋಚನೆ ಮಾಡೋಣ" ಎಂದನು.

ಪಾಪ, ಆ ಪಂಡಿತ ಭೂತಕ್ಕೆ ಬೇರೆ ಉಪಾಯವೇ ಇರಲಿಲ್ಲ. ಇಂತಹ ಪರಾಭವವನ್ನು ಅದು ಈವರೆಗೆ ಹೊಂದಿರಲಿಲ್ಲ. ತಿಮ್ಮನನ್ನು ಕೆಳಗಿಳಿಯುವಂತೆ ಬೇಡಿಕೊಂಡು, ಎಲ್ಲಿಗೋ ಹೋಯಿತು.

ಮತ್ತು ನಿಮಿಷಮಾತ್ರದಲ್ಲಿ ದೊಡ್ಡದೊಂದು ಕೊಪ್ಪರಿಗೆಯನ್ನು ತಂದು ಅವನ ಮುಂದೆ ಇಟ್ಟಿತು. ತಿಮ್ಮನು ಅದರ ಮುಚ್ಚಳ ತೆಗೆದು ನೋಡಿದಾಗ ಅದರ ತುಂಬ ಥಳಥಳನೆ ಮಿನುಗುವಬಂಗಾರದ ನಾಣ್ಯಗಳು !

"ಇನ್ನು ನನ್ನ ಜುಟ್ಟು ನನಗೆ ಕೊಡು" ಎಂದಿತು ಭೂತ. ತಿಮ್ಮಯ್ಯ ಚ.ರುಕಾಗಿಯೇ ಇದ್ದ. "ಹಾಗೆ ಅವಸರಪಡಬೇಡ. ಜುಟ್ಟು ಕೈಗೆ ಸಿಕ್ಕಿದ ಕೂಡಲೇ, ನೀನು ನನ್ನ ಕತ್ತು ಹಿಸುಕಿ ಕೊಂದರೆ ನಾನೇನು ಮಾಡಲಿ ಮತ್ತೆ? ಭೂತಗಳನ್ನು ನಂಬಲೇಬಾರದೆಂದು ದೊಡ್ಡವರು ಹೇಳುತ್ತಾರೆ. ಆದ್ದರಿಂದ ಈ ಕೊಪ್ಪರಿಗೆಯನ್ನು ಎತ್ತಿಕೊಂಡು ನನ್ನ ಮನೇವರೆಗೆ ಬಾ. ಆಮೇಲೆ ನಿನ್ನ ಜುಟ್ಟು ನಿನಗೆ ಕೊಟ್ಟುಬಿಡುತ್ತೇನೆ" ಎಂದನು.

ಅಯ್ಯೋ ಪಾಪ! ಅಡಕತ್ತಿಯೊಳಗಿನ ಅಡಕೆಯಂತಾಯಿತು ಆ ಭೂತ. ಇದೇನು ನನ್ನ ಕರ್ಮವೋ ಎಂದು ಅಳುತ್ತಾ, ಆ ಕೊಪ್ಪರಿಗೆಯನ್ನು ಹೊತ್ತುಕೊಂಡು ತಿಮ್ಮನ ಹಿಂದೆಯೇ ಹೊರಟಿತು ಭೂತ. ತಿಮ್ಮನು ಮುಂದೆ ನಡೆದ.

ತಿಮ್ಮನ ಬಡ ಗುಡಿಸಲು ಗ್ರಾಮದ ಒಂದು ಮೂಲೆಯಲ್ಲಿತ್ತು. ರಾತ್ರಿಯ ಹೊತ್ತಾದ್ದರಿಂದ ಯಾರಿಗೂ ತಿಳಿಯದಂತೆಯೇ ಅವನು ಗುಡಿಸಲನ್ನು ಸೇರಿದ. ಆ ಭೂತವನ್ನು ಹೊರಗೇ ನಿಲ್ಲಿಸಿ, ಅದರ ಮೇಲಿದ್ದ ಕೊಪ್ಪರಿಗೆಯ

ಹೊರೆಯನ್ನು ಇಳಿಸಿಕೊಂಡು ಅದನ್ನು ತನ್ನ ಮನೆಯೊಳಗೆ ಭದ್ರವಾಗಿಟ್ಟ. ಆಮೇಲೆ ಒಂದು ಒಂದು ತಮಾಷೆ ಮಾಡೋಣವೇ ಎಂಬ ಯೋಚನೆ ಬಂತು.

ಬೆಳಗಿನವರೆಗೂ ಅದಕ್ಕೆ ಜುಟ್ಟನ್ನು ಕೊಡದೆ ಇದ್ದರೆ, ಅದು ಎಲ್ಲಿಗೂ ಹೋಗದೆ ಬಾಗಿಲಲ್ಲಿಯೇ ಬಿದ್ದಿರುತ್ತದೆ. ಅನಂತರ ಗ್ರಾಮಸ್ಥರಿಗೆಲ್ಲಾ ತನ್ನ ಸಾಹಸ ಕೃತ್ಯವನ್ನು ಪ್ರದರ್ಶನ ಮಾಡಿ, ಭೂತವನ್ನು ಸಹಾ ತೋರಿಸಬಹುದು,—ಎಂದು ಯೋಚಿಸುವಾಗ ಭೂತವು ಹೊರಗಿನಿಂದ—"ಅಯ್ಯಾ, ನಾನು ಹೋಗುತ್ತೇನೆ. ನನ್ನ ಜುಟ್ಟು ಕೊಟ್ಟು ಬಿಡು" ಎಂದು ಕೂಗಿತು.

ತಿಮ್ಮ ಭೂತದ ಕಡೆಗೆ ಪುನಃ ನೋಡಿದನು. ಶಾಲುವೆ, ಹಾವುಗೆ, ಕುಂಡಲ, ಕಂಕಣಾದಿಗಳಿಂದ, ಸಾಕ್ಷಾತ್ ಒಬ್ಬ ಪಂಡಿತನಂತೆಯೇ ತೋರುತ್ತಿತ್ತು ಆ ಭೂತ. ಇದನ್ನು ನೋಡಿ ಗ್ರಾಮಸ್ಥರೆಲ್ಲಾ, ಅದು ಭೂತವಲ್ಲ, ಯಾವನೋ ಮಹಾ ಪಂಡಿತನೆಂದೇ ಅಂದುಕೊಂಡರೆ, ಅವನ ಜುಟ್ಟು ಕಿತ್ತದ್ದಕ್ಕಾಗಿ ತನ್ನನ್ನು ಒದೆದಾರು. ಅಲ್ಲದೆ ಕೊಪ್ಪರಿಗೆಯ ಗುಟ್ಟು ಬಯಲಾಗಿ ಹೋದರೂ ತನಗೆ ಪ್ರಮಾದವೇ ಎಂದು ತಿಮ್ಮನಿಗೆ ತೋರಿತು.

ಅವನು ಮೆಲ್ಲನೆ ಬಾಗಿಲನ್ನು ಓರೆ ಮಾಡಿ ಸಂದಿನಿಂದ ಆ ಜುಟ್ಟನ್ನು ಹೊರಕ್ಕೆ ಬಿಸುಟು "ಇನ್ನು ನಡೆ ಇಲ್ಲಿಂದ!" ಎಂದು ಗದರಿಸಿ, ಬಾಗಿಲು ಹಾಕಿ ತಾಳ ಜಡಿದುಕೊಂಡನು. ಭೂತವು ತನ್ನ ಜುಟ್ಟನ್ನು ಎತ್ತಿಕೊಂಡು— "ಹೂಂ! ಈ ಬಾರಿ ಬದುಕಿದೀ! ಇನ್ನೆಂದಾದರೂ ಆ ಪರಿಶೇಹಾಳಿಗೆ ಬಂದಿಯಾ! ಜಾಗ್ರತೆ!" ಎಂದು ಹೇಳಿಕೊಂಡು ಹೊರಟು ಹೋಯಿತು.

"ಜೀವವಿದ್ದರೆ ಆ ಕಡೆಗೆ ಹೋದೇನೆ?" ಎಂದುಕೊಂಡನು ತಿಮ್ಮ. ಬೆಳಗಾದಮೇಲೆಯೇ ಅವನು ಬಾಗಿಲು ತೆಗೆದದ್ದು.

ಮೆಲ್ಲಮೆಲ್ಲನೆ ಆ ಕೊಪ್ಪರಿಗೆಯ ನಾಣ್ಯಗಳನ್ನು ಕರಗಿಸಿ ಬಂಗಾರವಾಗಿ ಮಾಡಿ ಮಾರಿ, ಸ್ವಲ್ಪ ಕಾಲದಲ್ಲಿಯೇ ಅವನು "ಶ್ರೀಮಂತ ಸಾವುಕಾರ ತಿಮ್ಮಣ್ಣನವರು" ಆಗಿ ಮಾರ್ಪಟ್ಟನು. ಆ ತಿಮ್ಮನೇ ನಾನೆಂದು ತಿಮ್ಮಣ್ಣನವರು ಹೇಳಿದಾಗ ನಮಗೆ ನಂಬುವುದೇ ಕಷ್ಟವಾಯಿತು.



1



2



## ಇಂದಿನ ಮಕ್ಕಳು ಮುಂದಿನ ಜನಾಂಗ



3



4

1. ಚಿ. ವಿಜಯವಲ್ಲಿ - ಕೆ. ಆರ್. ನಗರ
2. ಚಿ. ಲೀಲಾವತಿ, ಮೈಸೂರು
3. ಚಿ. ಶಾಂತಾಪ್ರಭಾಕರ ಪ್ರಭು, ಪರೇಲ
4. ಚಿ. ಮಾಲತಿ, ಬೆಂಗಳೂರು

# ಹೂ ಮಾ ಲೆ



ಒಬ್ಬ ರಾಜ. ಆ ರಾಜನಿಗೆ ಚಂದ್ರಾವಳಿ ಎಂಬ ಒಬ್ಬಳು ಮಗಳು. ಬಹಳ ಚೆಲುವೆ. ಅವಳಿಗೆ ಯುಕ್ತ ವಯಸ್ಸು ಬಂದಾಗ 'ಸ್ವಯಂವರ' ಮಾಡಬೇಕೆಂದು, ರಾಜನು ಡಂಗುರ ಸಾರಿಸಿದನು. ಅನೇಕ ದೇಶಗಳಿಂದ ಅನೇಕಮಂದಿ ರಾಜಕುಮಾರರು ಸ್ವಯಂವರಕ್ಕೆ ಬಂದರು.

ತಾನು ಮೂರು ಪ್ರಶ್ನೆಗಳನ್ನು ಕೇಳುವೆನು, ಆ ಪ್ರಶ್ನೆಗಳಿಗೆ ಸರಿಯಾದ ಉತ್ತರ ಯಾರು ಹೇಳುವರೋ ಅವರನ್ನೆ ವರಿಸುವೆನೆಂದು ಚಂದ್ರಾವಳಿ ಪ್ರಕಟ ಮಾಡಿದಳು. ಏನು ಪ್ರಶ್ನೆಯೋ ಎಂದು ಎಲ್ಲರೂ ಕಿವಿನಿಗುರಿಸಿಕೊಂಡು ಕುಳಿತಿದ್ದರು.

ವಿಸ್ತಾರವಾದ ಅಲಂಕಾರ ಮಂಟಪದಲ್ಲಿ ರಾಜಕುಮಾರರೆಲ್ಲಾ ಕುಳಿತಿದ್ದರು. ರಾಜಕುಮಾರಿ ಕೂಡಾ ಅಲ್ಲಿಗೆ ಬಂದು ಉಚಿತಾಸನದಲ್ಲಿ ಅಲಂಕೃತಳಾದಳು. ಅವಳ ಕೈಯಲ್ಲಿ ಹೂವಿನ ಮಾಲೆ ಕಂಗೊಳಿಸುತ್ತಿತ್ತು.

ಅವಳು ಒಬ್ಬೊಬ್ಬ ರಾಜಕುಮಾರರನ್ನೂ ಬಳಿಗೆ ಬರಮಾಡಿಸಿಕೊಂಡು, ಮೊದಲನೇ ಪ್ರಶ್ನೆ ಕೇಳಿದಳು: "ಈ ವಿವಾಹದ ಔತಣವನ್ನು ಸ್ವೀಕರಿಸಲು ನಿಮಗಿರುವ ಅರ್ಹತೆಯೇನು?"

ಈ ಪ್ರಶ್ನೆಗೆ ಅನೇಕರು ಅನೇಕ ವಿಧವಾಗಿ ತಮ್ಮ ತಮ್ಮ ಹೆಗ್ಗಳಿಕೆಯನ್ನೆ ಹೇಳಿಕೊಂಡರು. ಕಟ್ಟಕಡೆಗೆ ಚಂದ್ರಗುಪ್ತನೆಂಬ ರಾಜಕುಮಾರನು—"ಹಸಿವೆಯಿಂದಿರುವುದೇ ನನಗಿರುವ ಅರ್ಹತೆ" ಎಂದನು. ಚಂದ್ರಾವಳಿಯ ಮುಖದಲ್ಲಿ ಸಂತೃಪ್ತಿ ಸುಳಿಯಿತು.

"ಮದುವೆಯಾದ ಮೇಲೆ ನನ್ನನ್ನು ಹೇಗೆ ನೋಡುವಿರಿ?" ಇದು ಅವಳ ಎರಡನೆ ಪ್ರಶ್ನೆ.

"ದೇವತೆಯಂತೆ ಪೂಜಿಸುವೆನು" "ಯಜಮಾನಿಯಾಗಿ ನೋಡುವೆನು" "ನಿನ್ನ ಗುಲಾಮನಾಗಿರುವೆನು" ಎಂದು ಅನೇಕರು ಅನೇಕ ವಿಧವಾಗಿ ಹೇಳಿದ ಮೇಲೆ, ಚಂದ್ರಗುಪ್ತನು—"ನಿನ್ನನ್ನು ನನ್ನ ಪ್ರಾಣಮಿತ್ರನಂತೆ ನೋಡುವೆನು" ಎಂದನು. ಚಂದ್ರಾವಳಿಯ ಮುಖವು ವಿಕಸಿತವಾಯಿತು.

"ಮದುವೆಯಾದರೆ ನನಗೇನು ಕೊಡುವಿರಿ?" ಎಂದು ಮೂರನೇ ಪ್ರಶ್ನೆ ಕೇಳಿದಳು.

ಇದಕ್ಕೆ ಎಲ್ಲರೂ ಒಬ್ಬರನ್ನೊಬ್ಬರು ಸ್ಪರ್ಧಿಸುತ್ತಾ—"ಚಂದ್ರಹಾರ ಕೊಡುವೆ" "ನನ್ನ ಸರ್ವಸ್ವವೂ ನಿನಗೇ" "ನೀನು ಏನು ಕೇಳಿದರೂ ಕೊಡುವೆ" ಎಂದು ಇಷ್ಟ ಬಂದಂತೆ ಹೇಳಿದರು. ಚಂದ್ರಗುಪ್ತನು "ನನ್ನ ಹೃದಯವನ್ನು ಕೊಡುತ್ತೇನೆ" ಎಂದನು.

ಒಡನೇ ಅವಳ ಕೈಯಲ್ಲಿದ್ದ ಹೂವಿನ ಮಾಲೆ ಚಂದ್ರಗುಪ್ತನ ಕೊರಳನ್ನು ಅಲಂಕರಿಸಿತು!

# ನ್ಯಾಯ ಕತ್ತರಿ

ಪೂರ್ವಕಾಲದಲ್ಲಿ ತುಳುವದೇಶಕ್ಕೆ ನ್ಯಾಯ ದೇಶವೆಂಬ ಒಳ್ಳೆಯ ಖ್ಯಾತಿ ಯಿತ್ತು. ಇದಕ್ಕೆ ಕಾರಣ, ಅಲ್ಲಿ ನ್ಯಾಯವಿಚಾರಣೆಗೆ ಒಂದು ವಿಚಿತ್ರ ಸಾಧನವಿತ್ತು. ಅದೊಂದು ನ್ಯಾಯ ಕತ್ತರಿ. ಅದು ಅನೇಕ ತಲೆಮಾರುಗಳ ಹಿಂದೆ ರಾಜವಂಶಕ್ಕೆ ಧರ್ಮದೇವತೆಯಿಂದ ವರ ಪ್ರಸಾದವಾಗಿ ದೊರೆತಿತ್ತು. ತಲೆತಲಾಂತರವಾಗಿ ಅದೊಂದು ಅಮೂಲ್ಯವಸ್ತುವಾಗಿ ಪ್ರಜೆಗಳಿಗೆ ನ್ಯಾಯ ದಾನಮಾಡುತ್ತ ಮೆರೆಯುತ್ತಿತ್ತು. ಅದರ ನ್ಯಾಯ ನಿರ್ಣಯವು ಏನೂ ತಪ್ಪಿಲ್ಲದೆ ಎಲ್ಲರೂ ಒಪ್ಪುವಂತೆಯೂ, ಮೆಚ್ಚುವಂತೆಯೂ ನಡೆಯುತ್ತಿತ್ತು. ವಾದಿಪ್ರತಿವಾದಿಗಳು ನ್ಯಾಯಸಾಧನೆಗಾಗಿ ಯಾವ ನ್ಯಾಯಾಧಿಪತಿಯ ಬಳಿಗೂ ಹೋಗುವ ಅಗತ್ಯವಿರಲಿಲ್ಲ. ವಿಚಾರಣೆ, ನಿರ್ಣಯ ಎಲ್ಲವೂ ಆ ಕತ್ತರಿಯ ಮೂಲಕವಾಗಿಯೇ ನಡೆಯುತ್ತಿತ್ತು.

ರಾಜಪ್ರಾಸಾದದ ಭವ್ಯಮಂಟಪದಲ್ಲಿ ಆ ಪ್ರಸಿದ್ಧವಾದ ಕತ್ತರಿಯನ್ನು ತೂಗಾಡಿಸಿಟ್ಟಿದ್ದರು. ವಾದಿ-ಪ್ರತಿವಾದಿಗಳು ಆ ನ್ಯಾಯ ಕತ್ತರಿಯ ಬಳಿಗೆ ಬರುತ್ತಿದ್ದರು. ಅವರಿಗೆ ಬೇಕಾದ ಮಧ್ಯವರ್ತಿಗಳೂ, ಯಾರ ಪಕ್ಷದಲ್ಲಿ ನ್ಯಾಯವಿದೆಯೋ ನೋಡಬೇಕೆಂಬ ಕುತೂಹಲವುಳ್ಳ ಇತರ ಜನರೂ ಸುತ್ತಲೂ ನಿಲ್ಲುತ್ತಿದ್ದರು.

ವಾದಿ ತನಗೆ ಜರುಗಿದ ಅನ್ಯಾಯವನ್ನೆಲ್ಲಾ ಸ್ಪಷ್ಟವಾಗಿ ವಿವರಿಸಿ ತನ್ನ ಎರಡು ಕೈಗಳನ್ನೂ ಆ ಕತ್ತರಿಯ ಮಧ್ಯದಲ್ಲಿ ಇಡುತ್ತಿದ್ದನು. ಹಾಗೆಯೇ ಪ್ರತಿವಾದಿ ತಾನು ನಿರ್ದೋಷಿ ಎಂಬುದನ್ನು ಸಮರ್ಥಿಸಿಕೊಂಡು ಆ ಕತ್ತರಿಯ ಮಧ್ಯದಲ್ಲಿ ತನ್ನ ಎರಡು ಕೈಗಳನ್ನೂ ಇಡುತ್ತಾನೆ. ಆ ಇಬ್ಬರಲ್ಲಿ ಯಾವನು ಸುಳ್ಳಾಡಿದನೋ ಅವನ ಕೈಗಳನ್ನು ಆ ಕತ್ತರಿ ಖಂಡಿಸಿ ಬಿಡುತ್ತಿತ್ತು.

ಒಮ್ಮೆ ವರಪ್ರಸಾದಿತವಾದ ಆ ಕತ್ತರಿಯ ಕೀರ್ತಿಗೇ ಬಾಧೆ ಬರುವಂತಹ ಸಮಸ್ಯೆಯುಂಟಾಯಿತು, ಅದಕ್ಕೇ ನಿರ್ಣಯಿಸಿಕೊಳ್ಳಲಾಗದ ಒಂದು ಜಟಿಲ ಸಮಸ್ಯೆಯದು! ಹೀಗೊಂದು ಬಂದೀತೆಂದು ಎಂದೂ ಯಾರೂ ಕನಸಿನಲ್ಲಿಯೂ ನೆನಸಿರಲಿಲ್ಲ ನಡೆದುದು ಇಷ್ಟೆ: ಅಕ್ಕ ಪಕ್ಕದ ವ್ಯಾಪಾರಿಗಳಿಬ್ಬರ ಮಧ್ಯದಲ್ಲಿ

ಡಿ. ಅಹಮದಬ್ಯಾರಿ, ಕುಂಬಳೆ



ಒಂದು ತಗಾದೆ ಬಂತು. ಮೊದಲನೇ ವರ್ತಕನು—"ನಾನೊಮ್ಮೆ ದೂರದೇಶಕ್ಕೆ ಪ್ರಯಾಣ ಮಾಡಬೇಕಾಗಿ ಬಂತು. ಆಗ ಇವನ ಹತ್ತಿರ ನೂರು ಬಂಗಾರದ ಮೊಹರಿಗಳನ್ನು ಕೊಟ್ಟು ಭದ್ರವಾಗಿಟ್ಟಿರುವಂತೆ ಹೇಳಿದೆನು. ತಿರುಗಿ ಬಂದು ಈಗ ನಾನು ಆ ಬಂಗಾರವನ್ನು ಕೇಳಿದರೆ ಇಲ್ಲವೇ ಇಲ್ಲವೆನ್ನುತ್ತಾನೆ. ಇದೇನು ನ್ಯಾಯ?" ಎಂದನು.

ಅದಕ್ಕೆ ಎರಡನೇ ವರ್ತಕನು ಹೀಗೆ ಸಮಾಧಾನ ಹೇಳಿದ—"ಇವನು ಯಾವ ದೇಶಕ್ಕೆ ಹೋದನೋ ಇಲ್ಲವೋ ನನಗೆ ಗೊತ್ತಿಲ್ಲ. ನಾನು ಇವನ ಬಂಗಾರದ ಮೊಹರಿಗಳನ್ನು ಇಟ್ಟುಕೊಳ್ಳಲೇ ಇಲ್ಲ. ಇನ್ನೊಬ್ಬರ ವಸ್ತುವನ್ನು ನುಂಗುವ ಬುದ್ಧಿ ನನಗಿಲ್ಲ. ನಾನು ಪ್ರಮಾಣ ಮಾಡಲಿಕ್ಕೆ ಸಿದ್ಧನಿದ್ದೇನೆ"

ಈ ಇಬ್ಬರಲ್ಲಿ ಯಾರು ನಿಜ ಹೇಳುವರೋ ಯಾರು ಸುಳ್ಳು ಹೇಳುವರೋ ಹೇಗೆ ಕಂಡು ಹಿಡಿಯುವುದು? ಇಬ್ಬರೂ ಪ್ರಮಾಣಕ್ಕೆ ಸಿದ್ಧರಾಗಿಯೇ ಇದ್ದಾರಲ್ಲ! ಎಲ್ಲರಿಗೂ ಆಶ್ಚರ್ಯವಾಯಿತು.

ಆಗ ಹತ್ತುಮಂದಿ ಹಿರಿಯರು ನಾಲ್ಕು ದಿನ ಗಡು ನಿರ್ಣಯ ಮಾಡಿ, ಅಷ್ಟರೊಳಗೆ ರಾಜೀಯಾಗದಿದ್ದರೆ 'ನ್ಯಾಯ ಕತ್ತರಿಯ' ನಿರ್ಣಯಕ್ಕೆ ಒಳಗಾಗಬೇಕೆಂದು ವಿಧಿಸಿ ಕಳುಹಿಸಿದರು.

"ಎಂಥ ಹಸಿಹಸೀ ಸುಳ್ಳು! ನೂರು ಮೊಹರಿಗಳನ್ನು ಎಣಿಸಿ ನಾನು ಇವನೊಡನೆ ಕೊಟ್ಟಿದ್ದು ಇಲ್ಲವೆನ್ನುತ್ತಾನಲ್ಲ?" ಎಂದುಕೊಂಡನು ಮೊದಲನೇ ವರ್ತಕ. ನಿರ್ದಾಕ್ಷಿಣ್ಯವಾದ ನ್ಯಾಯಕತ್ತರಿಯ ವಿಷಯ ಗೊತ್ತಿದ್ದೂ ಇಷ್ಟು ಧೈರ್ಯವಾಗಿ ಸುಳ್ಳು ಹೇಳುತ್ತಾನಲ್ಲ! ಅವನು ಹೇಗೆ ಪಾರಾಗುತ್ತಾನೋ ನೋಡಲೇ ಬೇಕಾಯಿತು.

ಆದರೆ ಆ ಎರಡನೇ ವರ್ತಕನು ಸಾಮಾನ್ಯನೆ? ಅವನಿಗೆಮಾತ್ರ ನ್ಯಾಯಕತ್ತರಿಯ ವಿಷಯ ಗೊತ್ತಿಲ್ಲವೆ?

ಎಲ್ಲರಿಗಿಂತಲೂ ಹೆಚ್ಚಿಗೇ ಗೊತ್ತಿತ್ತು! ಆದ್ದರಿಂದಲೇ ಅಷ್ಟು ಧೈರ್ಯ ಅವನಿಗೆ! ಅವನ ಮನಸ್ಸಿನಲ್ಲಿ ಹೊಳೆದ ಉಪಾಯವೇನೋ? ಅದೇನಾದರೂ ಆ ನ್ಯಾಯಕತ್ತರಿಯ ಬಳಿಯಲ್ಲಿ ಗೊತ್ತಾಗುವುದಷ್ಟೆ?

ಪ್ರತಿವಾದೀ ವರ್ತಕನು ದೊಡ್ಡಮನುಷ್ಯನ ವೇಷವನ್ನು ಹಾಕಿಕೊಂಡು, ದಂತದ ಹಿಡಿಯ ಕೈಕೋಲನ್ನು ಠೀವಿಯಿಂದ ಊರಿಕೊಳ್ಳುತ್ತಾ, ಗಂಭೀರವಾದ ನಡಿಗೆಯಿಂದ ಕತ್ತರಿ ಇರುವ ನ್ಯಾಯಮಂಟಪಕ್ಕೆ ಬಂದನು. ಮಧ್ಯವರ್ತಿಗಳೂ ಪ್ರಜೆಗಳೂ ಸುತ್ತಲೂ ಕೂಡಿದ್ದರು. ಮೊದಲನೇ ವರ್ತಕನೂ ಬಂದಿದ್ದ.

ಆಗ ಪ್ರತಿವಾದಿ ವರ್ತಕನು ಅವನ ಬಳಿಗೇ ಹೋಗಿ—"ನಾವಿಬ್ಬರೂ ಎಷ್ಟೋ ಸ್ನೇಹಿತರಾಗಿದ್ದೆವು. ಗ್ರಹಚಾರವಶಾತ್ ಇದೊಂದು ವಿವಾದ ಬಂತು. ಅದನ್ನೀಗ ಈ ನ್ಯಾಯಕತ್ತರಿ ನಿರ್ಣಯಿಸುವುದಷ್ಟೆ? ಅನಂತರ ನಾವಿಬ್ಬರೂ ಮೊದಲಿನಂತೆ ಸ್ನೇಹಿತರಾಗಿಯೇ ಇರಬೇಕೆಂದು ಆಶಿಸುತ್ತೇನೆ" ಎಂದನು.

"ಏನೋ ಕತ್ತರಿಯ ನಿರ್ಣಯ ನೆರವೇರಲಿ. ಮತ್ತೆ ನೋಡೋಣ" ಎಂದನು ವಾದೀವರ್ತಕ.

ಅನಂತರ ಹಿರಿಯರ ಅಪ್ಪಣೆಯಂತೆ ವಾದೀವರ್ತಕನು ಎದ್ದುಹೋಗಿ, ಪ್ರತಿವಾದಿ ವರ್ತಕನ ನಂಬುಗೆಯದ್ರೋಹವನ್ನು ಕುರಿತು ಹೇಳಿಕೊಂಡು, ಕತ್ತರಿಗಳ ನಡುವೆ ತನ್ನ ಕೈಗಳನ್ನು ತೂರಿಸಿದನು. ಕತ್ತರಿ ಕದಲಲಿಲ್ಲ; ಹಾಗೇ ಇತ್ತು. ಬಳಿಕ ಅವನು ಕೈಯನ್ನು ತೆಗೆದು ಆ ಕತ್ತರಿಯ ಈಚೆಯ ಬದಿಯಲ್ಲಿ ನಿಂತುಕೊಂಡನು.




ನಂತರ ಪ್ರತಿವಾದಿ ವರ್ತಕನ ಸರದಿ ಬಂತು. ಅವನು ನಗುಮುಖದಿಂದ ನಿರ್ಭಯವಾಗಿ ಆ ಕತ್ತರಿಯ ಬಳಿಗೆ ಬಂದು, ಅಲ್ಲಿ ನಿಂತಿದ್ದ ವಾದೀವರ್ತಕನ ಕೈಗೆ ತನ್ನ ಕೋಲನ್ನು ಕೊಟ್ಟು, ಕೈಗಳೆರಡನ್ನೂ ಕತ್ತರಿಯ ಮಧ್ಯದಲ್ಲಿಟ್ಟು ಪ್ರಮಾಣಮಾಡಿ,—"ನಾನು ಯಾರ ಬಂಗಾರವನ್ನೂ ಅಪಹರಿಸಲಿಲ್ಲ. ಈ ವರ್ತಕನ ಯಾವಸೊತ್ತೂ, ಮೊಹರಿಯೋ, ಕಾಸೋ ದುಡ್ಡೋ ಯಾವುದೂ ನನ್ನ ಬಳಿಯುಲಿಲ್ಲ. ಇನ್ನು ನಾನು ಹೆಚ್ಚಿಗೆ ಏನು ಹೇಳಲಿ? ಎಲ್ಲಾ ಈ ನ್ಯಾಯಕತ್ತರಿಗೇ ಗೊತ್ತು" ಎಂದು ಹೇಳಿದನು.

ಮಧ್ಯವರ್ತಿಗಳೂ ಮತ್ತೆ ಉಳಿದವರೂ ಎಲ್ಲರೂ ಆ ಕತ್ತರಿಯ ಕಡೆಗೇ ಕಣ್ಣಿಟ್ಟು ನೋಡುತ್ತಿದ್ದರು. ಈ ಕ್ಷಣದಲ್ಲೆ ಅವನ ಕೈ

ತುಂಡಾಗಿಹೋಗುವುದೆಂದು ಎಲ್ಲರೂ ನೆನೆದಿದ್ದರು. ಏಕೆಂದರೆ ಮೊದಲನೆಯವನ ಕೈಗಳು ಖಂಡಿಸಲ್ಪಡದ್ದರಿಂದ, ಇವನೇ ತಪ್ಪುಗಾರನಾಗಿರಬೇಕೆಂದು ಎಲ್ಲರೂ ಭಾವಿಸಿದ್ದರು.

ಆದರೆ ಆಶ್ಚರ್ಯ! ಆ ನ್ಯಾಯಕತ್ತರಿ ಕದಲಲೇ ಇಲ್ಲ! ಆ ಇಬ್ಬರಲ್ಲಿ ತಪ್ಪುಗಾರನಾರೆಂದು ಇನ್ನು ಹೇಗೆ ಕಂಡುಹಿಡಿಯುವುದು?

ಇದುವರೆಗೂ ಹೀಗೆಂದೂ ಆಗಿದ್ದಿಲ್ಲ. ಪ್ರಜೆಗಳೆಲ್ಲಾ ಬೆರಗಾಗಿ ನೋಡುತ್ತಿದ್ದರು. ಮಧ್ಯವರ್ತಿಗಳಿಗೆ ಏನೂ ತೋರಲಿಲ್ಲ.

ಪ್ರತಿವಾದೀವರ್ತಕನು ಕತ್ತರಿಯೊಳಗಿಂದ ತನ್ನ ಕೈಯನ್ನು ತೆಗೆದುಕೊಂಡು, ಸಂತೋಷದಿಂದ ಈಚೆಗೆ ಬಂದನು. ಬಳಿಕ ನಗುತ್ತಾ ವಾದಿಯ ಬಳಿಯಲ್ಲಿದ್ದ ತನ್ನ ಕೈಕೋಲನ್ನೆತ್ತಿಕೊಂಡು—"ಈಗ ಸಂದೇಹ ತೀರಿತಷ್ಟೆ? ಇನ್ನು ನಾವು ಮೊದಲನಂತೆಯೇ ಸ್ನೇಹಿತರಾಗಿರಬಹುದಷ್ಟೆ?" ಎನ್ನುತ್ತ ಹೊರಡಲನುವಾದನು.

ಮಧ್ಯಸ್ಥರ ಗುಂಪಿನಲ್ಲಿ ಒಬ್ಬ ಸೂಕ್ಷ್ಮಬುದ್ಧಿಯುವನಿದ್ದ. ಅವನು ಪ್ರತಿವಾದಿಯ ಚರ್ಯೆಗಳನ್ನೆಲ್ಲಾ ಬಹಳ ಸೂಕ್ಷ್ಮವಾಗಿ ನೋಡುತ್ತಿದ್ದ. ನ್ಯಾಯಕತ್ತರಿಯನ್ನು ಮೋಸಪಡಿಸಿದ ಅವನ ಯುಕ್ತಿ ಕೂಡಲೇ ಅವನಿಗೆ ಹೊಳೆಯಿತು.

ಒಡನೆಯೇ ಆತನು ಸರಸರನೆ ಆ ಪ್ರತಿವಾದೀ ವರ್ತಕನನ್ನು ನಿಲ್ಲುವಂತೆ ಹೇಳಿ, ಅವನ ಕೈಯಲ್ಲಿದ್ದ ಕೋಲನ್ನು ಎಳೆದುಕೊಂಡು ಅದರ ಹಿಡಿಯನ್ನು ಕಿತ್ತನು. ಕೂಡಲೇ ಬಂಗಾರದ ಮೊಹರಿಗಳು ಅದರೊಳಗಿಂದ ಕಣಕಣನೆ ಕೆಳಕ್ಕೆ ಸುರಿದುವು! ಎಲ್ಲರಿಗೂ ಅತ್ಯಾಶ್ಚರ್ಯ! ಎಣಿಸಿದರೆ ಅವು ಸರಿಯಾಗಿ ನೂರು ಬಂಗಾರದ ಮೊಹರಿಗಳು!

ಹೀಗೆ ಸಿಕ್ಕಿಬಿದ್ದ ಆ ವರ್ತಕನು, ಉಪಾಯವಿಲ್ಲದೆ ಫಿರ್ಯಾದಿಯನ್ನು ಸಂಪೂರ್ಣವಾಗಿ ಒಪ್ಪಿಕೊಂಡನು. ಬಳಿಕ ವಾದಿಯ ಮೊಹರಿಗಳನ್ನು ವಾದಿಗೆ ಒಪ್ಪಿಸಿ, ಅಪರಾಧಿಗೆ ತಕ್ಕ ಶಿಕ್ಷೆಯನ್ನು ವಿಧಿಸಲಾಯಿತು.

ಅಂದಿನಿಂದ ಪ್ರಜೆಗಳಿಗೆ ಕತ್ತರಿಯ ಮೇಲೆ ವಿಶ್ವಾಸ ತಗ್ಗಿತು. ಅದರ ಪ್ರಭಾವ ಕುಂದಿತು. ಬಳಿಕ ಆ ಪುರಾತನ ಕತ್ತರಿಯನ್ನು ಅಲ್ಲಿಂದ ಕದಲಿಸಿ, ಪುರಾತನ ವಸ್ತು ಸಂಗ್ರಹಾಲಯದಲ್ಲಿ ಇಡಿಸಿದರು.





# ಜ್ಯೋತಿರ್ವಾಕ್ಯ

ಗಾಂಧಾರ ದೇಶದ ನರಸಿಂಹ ರಾಜನು ಬಹಳ ಅಕ್ಕರೆಯಿಂದ ಪ್ರಜೆಗಳನ್ನು ಪಾಲಿಸುತ್ತಿದ್ದನು. ತಾನೇ ಸ್ವತಃ ಪ್ರಜೆಗಳ ಸ್ಥಿತಿಗತಿಗಳನ್ನು ಅರಿತುಕೊಳ್ಳುತ್ತಿದ್ದನು. ಆದಕ್ಕಾಗಿ ಆಗಾಗ ಮಾರುವೇಷ ಹಾಕಿಕೊಂಡು ಊರೂರು ತಿರುಗುತ್ತಿದ್ದನು. ಆಗ ಅವನ ವಿಶ್ವಾಸದ ಮಂತ್ರಿಯೂ ಅವನೊಂದಿಗಿರುತ್ತಿದ್ದ.

ಒಮ್ಮೆ ಆ ರಾಜಮಂತ್ರಿಗಳು ಮಾರುವೇಷದಿಂದ ಹೋಗಿ ಹೋಗಿ ಮಧ್ಯಾಹ್ನದ ವೇಳೆಯಲ್ಲಿ ಒಂದು ಗ್ರಾಮವನ್ನು ಹೊಕ್ಕರು.

ಅಲ್ಲಿ ಒಂದು ಮನೆಯಮುಂದೆ ಸ್ಫುರದ್ರೂಪಿಯಾದೊಬ್ಬನು ವೈಶ್ವದೇವ ಮಾಡಿ ಅಂಗಳದಲ್ಲಿ ಕಾಗೆಗಳಿಗೆ ಅನವನ್ನು ಹಾಕುವುದನ್ನು ನೋಡಿದರು. ಆವನ ಮೈ ಬಣ್ಣ ನಿಂಬೇಹಣ್ಣಿನದು. ಸುಮಾರು ಇಪ್ಪತ್ತು ವರ್ಷ ಪ್ರಾಯವಿದ್ದೀತು. ಪ್ರಾಯಕ್ಕೆ ತಕ್ಕ ಒಡ್ಡೂ ಒಡಲೂ ಹೊಂದಿಕೊಂಡಿತ್ತು. ನೋಡಲು ಒಳ್ಳೇ ಸುಂದರನಾಗಿದ್ದ.

ಮಾರು ವೇಷದಲ್ಲಿರುವ ರಾಜಮಂತ್ರಿಗಳು ಅವನನ್ನು ಕಂಡು ಮಾತಾಡಿಸಿದರು. ಮತ್ತು ಅವನ ಮನೆಯಲ್ಲಿ ವಿಶ್ರಾಂತಿ ಪಡೆಯಲು ಬಯಸಿದರು. ಅವನೂ ಸಂತೋಷದಿಂದ ಅವರಿಗೆ ಆತಿಥ್ಯವನ್ನಿತ್ತು ಆದರಿಸಿದನು.

ಆಗ ನಡೆದ ಮಾತುಕತೆಗಳಿಂದ ಆ ಯುವಕನ ಪರಿಚಯ ತಿಳಿದುಬಂತು. "ಮಿಹಿರ" ಎಂದು ಅವನ ಹೆಸರು. ಅವನು ದೊಡ್ಡ ಜ್ಯೋತಿಃ ಪಂಡಿತನೆಂದೂ ತಿಳಿದುಬಂತು.

ಅವನ ಜ್ಯೋತಿಷ್ಯವನ್ನು ಪರೀಕ್ಷಿಸಬೇಕೆಂದುಕೊಂಡು ರಾಜನು "ಸ್ವಾಮಿ, ನಾವು ವರ್ತಕರು. ವ್ಯಾಪಾರಕ್ಕಾಗಿ ಹೊರಟಿದ್ದೇವೆ. ನಮಗೆ ಲಾಭವಾದೀತೋ? ಯಾವಾಗ ಪ್ರಾರಂಭಿಸಿದರೆ ಲಾಭ? ದಯಮಾಡಿ ಹೇಳಬೇಕು" ಎಂದನು.

ಒಡನೆಯೇ ಮಿಹಿರನು ಅವರ ಮುಖಗಳನ್ನು ನೋಡಿ—"ಅಯ್ಯಾ, ನೀವಿಬ್ಬರೂ ವರ್ತಕರಲ್ಲ- ಕ್ಷತ್ರಿಯರು, ಅರಸು ಪರಂಪರೆಗೆ ಸೇರಿದವರು. ಸತ್ಯ ಹೇಳಿದ್ದಕ್ಕೆ ಕ್ಷಮಿಸಬೇಕು" ಎಂದುದನ್ನು ಕೇಳಿ ಅವರಿಗೆ ಆಶ್ಚರ್ಯವಾಯಿತು. ತಮ್ಮ ನಿಜಸ್ಥಿತಿಯನ್ನು ಸರಿಯಾಗಿ ಹೇಳಿದರು. ರಾಜನು ಅವನ ಪಾಂಡಿತ್ಯಕ್ಕೆ

ಶಾಂತಾ ಪದ್ಮನಾಭ, ಹೊಸಪೇಟೆ



ಮೆಚ್ಚಿ ಅವನಿಗೆ ತನ್ನ ಆಸ್ಥಾನದಲ್ಲಿ ಪಂಡಿತ ಸ್ಥಾನವಿತ್ತು ಗೌರವಿಸಿದನು.

ಹೀಗಿರಲು ಬಹಳಕಾಲದಮೇಲೆ ಆ ರಾಜನಿಗೆ ಒಬ್ಬ ಕುಮಾರನು ಉದಯಿಸಿದನು. ಬಹು ಕಾಲ ಮಕ್ಕಳಿಲ್ಲದೆ, ಈಗ ಹುಟ್ಟಿದ ಒಂದೇ ಮಗು ಅದು. ಮಗುವಿನ ಜಾತಕವನ್ನು ತಯಾರಿಸುವಂತೆ ಆಸ್ಥಾನ ಜ್ಯೋತಿಷ್ಕರಿಗೆ ರಾಜಾಜ್ಞೆಯಾಯಿತು. ದೊಡ್ಡ ದೊಡ್ಡ ಜ್ಯೋತಿಷ್ಕರೆಲ್ಲಾ ಶಾಸ್ತ್ರಾದಿಗಳನ್ನು ತಿರುಗಿಸಿ, ಕವಡೆಗಳನ್ನು ಗುಣಿಸಿ, ತಮ್ಮ ಎಲ್ಲಾ ಶಕ್ತಿ ಜ್ಞಾನಗಳನ್ನು ವಿನಿಯೋಗಿಸಿ, ರಾಜಕುಮಾರನ ಜಾತಕವನ್ನು ಸಿದ್ಧಪಡಿಸಿದರು.

ಮತ್ತೆ ದರ್ಬಾರು ನೆರೆಸಿ ಅರಸನು ಜಾತಕದ ಫಲಿತವನ್ನು ಕೇಳಿದನು. ಎಲ್ಲರೂ ರಾಜಕುಮಾರನ ಜಾತಕವು ಅತ್ಯಂತ ದಿವ್ಯವಾಗಿರುವುದೆಂದೂ, ಆದರೆ ಇಪ್ಪತ್ತನೇ ವಯಸ್ಸಿನಲ್ಲಿ ಒಂದು ಸಣ್ಣ ಗಂಡವು ಬರುವುದೆಂದೂ, ಅದೇನೂ ಪ್ರಮಾದವಲ್ಲ, ಸುಲಭವಾಗಿ ದಾಟಸಬಹುದೆಂದೂ ಎಲ್ಲ ಜ್ಯೋತಿಷ್ಕರೂ ಹೇಳಿದರು.

ಆದರೆ ಮಿಹಿರನು ಏನು ಹೇಳಿದನು ಗೊತ್ತೆ? ಆ ಬಾಲಕನಿಗೆ ಇಪ್ಪತ್ತನೇ ವಯಸ್ಸಿನಲ್ಲಿ ಇಂತಹದಿನ ಸಂಜೆ ಐದುವರೆ ಗಂಟೆಗೆ ಕಾಡುಹಂದಿಯ ಮೂಲಕವಾಗಿ ಮರಣ ಸಂಭವಿಸುತ್ತದೆ" ಎಂದು ಕೊಂಚವೂ ಜಂಕದೆ ಖಂಡಿತವಾಗಿ ಹೇಳಿದನು. ರಾಜನಿಗೆ ಬಹಳ ಖೇದವಾದರೂ, ಅವನ ಧೈರ್ಯಕ್ಕೂ ಪಾಂಡಿತ್ಯಕ್ಕೂ ತುಂಬಾ ಮೆಚ್ಚಿದನು.

ರಾಜಪುತ್ರನಿಗೆ ಬಾಲ್ಯವು ದಾಟಿತು. ಕ್ರಮಕ್ರಮವಾಗಿ ನರಸಿಂಹರಾಜನಿಗೆ ಭಯವು ಹೆಚ್ಚಾಗುತ್ತಾ ಬಂತು. ಅತ್ತಣ ಸೂರ್ಯ ಇತ್ತ ಮೂಡಿದರೂ, ಮಿಹಿರನ ಜೋತಿರ್ವಾಕ್ಯವು ಸುಳ್ಳಾಗಲಾರದೆಂದು ಅರಸನಿಗೆ ಚೆನ್ನಾಗಿ ಗೊತ್ತು. ಹಾಗೆಂದು ಒಬ್ಬನೇ ಒಬ್ಬ ಮಗನನ್ನು ಉಳಿಸಲಿಕ್ಕೆ ನೋಡದೆ, ಸುಮ್ಮನೇ ಇದ್ದುಬಿಡಲು ಮನಸ್ಸು ಕೇಳುತ್ತದೆಯೆ? ಈ ಗಂಡವನ್ನು ಹೇಗೆ ತಪ್ಪಿಸಬಹುದೆಂದು ರಾಜನು ಹಗಲೂ ಇರುಳೂ ಯೋಚಿಸುತ್ತಿದ್ದನು.

ದೈವದ ವಿದಾಯಕ್ಕೆ ಅಡ್ಡಮಾಡುವ ಶಕ್ತಿ ತನಗಿಲ್ಲವೆಂದು ಅರಸನಿಗೆ ಗೊತ್ತಿದ್ದರೂ, ರಾಜನು ಆದಷ್ಟು ಪ್ರಯತ್ನಮಾಡಿದನು. ನಗ

ರಕ್ಕೆ ದೂರವಾಗಿ ಒಂದು ಮೈದಾನ ಪ್ರದೇಶ ದಲ್ಲಿ, ಏಳಂತಸ್ತಿನ ಒಂದು ಭವನವನ್ನು ಕಟ್ಟಿಸಿದನು. ಅದರಸುತ್ತೂ ಎತ್ತರವಾದ ಗೋಡೆಗಳ ಆವರಣವನ್ನೆಬ್ಬಿಸಿದನು. ಇರುವೆ ನುಸುಳಲಿಕ್ಕೂ ಸಾಧ್ಯವಿಲ್ಲದಷ್ಟು ಬಂದೋಬಸ್ತಾಗಿತ್ತು ಆ ಭವನ. ಹಾಗು ಅಲ್ಲಲ್ಲಿರುವ ಸುಂದರವಾದ ಶಿಲ್ಪ ವಿಗ್ರಹಗಳಿಂದ ಬಹಳ ಮನೋಹರವಾಗಿಯೂ ಇತ್ತು.

ಎಲ್ಲಾ ಸೌಕರ್ಯಗಳೂ ಆ ಭವನದಲ್ಲಿ ಜರುಗುವಂತೆ ಏರ್ಪಾಡು ಮಾಡಿ, ತನ್ನ ಕುಮಾರನನ್ನು ಅದರೊಳಗೆ ಪ್ರವೇಶ ಮಾಡಿಸಿದನು. ಅವನಿಗೆ ಬೇಕಾದ ಪರಿಚಾರಕರನ್ನೂ ಓರಿಗೆಯ ಗೆಳೆಯರನ್ನೂ ಅಲ್ಲಿ ಇರಿಸಿದನು. ಯಾರೂ ಆ ಮನೆಯಿಂದ ಹೊರಗೆ ಹೋಗದಂತೆಯೂ ಯಾವ ಪ್ರಾಣಿಯೂ ಅದರೊಳಗೆ ನುಸುಳದಂತೆಯೂ ಕಟ್ಟುಪಾಡುಗಳನ್ನು ಮಾಡಿದನು. ಬಳಿಕ ತಾನೂ ಆಗಾಗ ಅಲ್ಲಿಗೆ ಹೋಗುತ್ತಾ ಬರುತ್ತಾ ಇದ್ದನು.

ಮಿಹಿರನು ಹೇಳಿದ ಆ ಗಂಡ ಕಾಲವು ಸಮೀಪಿಸುತ್ತಾ ಬಂತು. ಮೂರು-ಎರಡು-ಒಂದು, ಹೀಗೆ ದಿನವು ಸಮೀಪ ಬಂದಿತು. ಇದುವರೆಗಿಂತಲೂ ತುಂಬಾ ಎಚ್ಚರಿಕೆಯಿಂದಿರುವಂತೆ ರಾಜನು ಸೈನಿಕರಿಗೆ ಕಟ್ಟಪ್ಪಣೆ ಮಾಡಿದನು.

ಗಂಡದ ದಿನ ಸೂರ್ಯೋದಯವಾಯಿತು. ರಾಜನು ಪ್ರತಿ ಕ್ಷಣಕ್ಕೂ ಕುಮಾರನ ಆರೋ




ಗ್ಯವು ತನಗೆ ತಿಳಿದು ಬರುವಂತೆ ಓಟದಾಳುಗಳನ್ನು ನೇಮಿಸಿದನು.

ಅಪರಾಹ್ನ ಮೂರು ಗಂಟೆಯವರೆಗೂ ಓಟದಾಳುಗಳು ಒಬ್ಬರಹಿಂದೊಬ್ಬರಾಗಿ ಬಂದು.—"ರಾಜಪುತ್ರನು ಚೆನ್ನಾದ್ದಾನೆ" ಎಂದು ಹೇಳಿ ಹೋಗುತ್ತಿದ್ದರು.

ಅನಂತರ ರಾಜನೇ ಕುಮಾರನ ಅರಮನೆಗೆ ಹೊರಟನು. ಮಿಹಿರನೂ ಬೇರೆ ಜೋಯಿಸರುಗಳೂ ರಾಜನ ಜತೆಯುಲ್ಲಿದ್ದರು. ಎಲ್ಲರಿಗೂ ಮಿಹಿರನ ಮಾತು ಫಲಿಸುವುದಿಲ್ಲವೆಂದೆ ತೋರುತ್ತಿತ್ತು. ಅವನೇನೋ ತಪ್ಪು ಲೆಖ್ಖ ಮಾಡಿರಬೇಕೆಂದು ಭಾವಿಸಿದರು. ಅವನ ಮಾತು ಸುಳ್ಳಾದರೆ, ರಾಜನಿಗೆ ಅವನ ಮೇಲಿರುವ ಗೌರವವೆಲ್ಲಾ ಹೋಗಿಬಿಡುತ್ತದೆ. ಅದಕ್ಕೇ ಜ್ಯೋತಿಷ್ಯವನ್ನು ಖಂಡಿತವಾಗಿ ಹೇಳ

ಬಾರದು, ಎಂದು ಮುಂಠಾಗಿ ಇತರ ಜೋಯಿಸರು ಯೋಚಿಸುತ್ತಿದ್ದರು.

ಐದು ಗಂಟೆಯಾಯಿತು. ಓಟದಾಳು ಬಂದು ರಾಜಕುಮಾರನು ಸುಖವಾಗಿರುವನೆಂದು ತಿಳಿಸಿ ಓಡಿದನು. ಮರು ನಿಮಿಷದಲ್ಲಿ ಇನ್ನೊಬ್ಬನು ಬಂದು ರಾಜಕುಮಾರನು ಮೇಲುಪ್ಪರಿಗೆಯನ್ನೇರಿ ಸುಖವಾಗಿ ಆಡುತ್ತಿದ್ದಾನೆಂದನು.

ರಾಜನು ಕುಮಾರನ ಭವನವನ್ನು ಸೇರಿದನು. ಆಗಲೂ ರಾಜಕುಮಾರನು ಸುಖವಾಗಿರುವ ವಾರ್ತೆ ತಿಳಿಯಿತು. ರಾಜನು ಮಿಹಿರನ ಮುಖ ನೋಡಿದನು.

"ನಾನು ಹೇಳಿದ ಗಳಿಗೆಯು ಕಳೆದು ಹೋಯಿತು. ರಾಜಕುಮಾರನು ದೀರ್ಘ ನಿದ್ರೆ ಮಾಡಿರುವುದು ಖಂಡಿತ." ಎಂದು ಮಿಹಿರನು ಕೊಂಚವೂ ಸಂದೇಹಿಸದೆ ವ್ಯಸನದಿಂದ ಹೇಳಿದನು.

ಆಗ ಬಂದ ಸೇವಕನು ಹೆದರುತ್ತಾ ನಿಂತನು. ರಾಜನು ಗಾಬರಿಯಿಂದಲೂ ದುಃಖದಿಂದಲೂ ಮಾಳಿಗೆಯ ಮೇಲೆ ಏರಿದನು.

ಏಳನೇ ಉಪ್ಪರಿಗೆಯಲ್ಲಿ ಧ್ವಜ ಸ್ತಂಭದ ಕೆಳಗೆ ರಾಜ ಕುಮಾನು ಬಿದ್ದಿದ್ದ. ಅವನ ಎದೆಯ ಮೇಲೆ ಭಾರವಾದ ವರಾಹ ವಿಗ್ರಹವಿತ್ತು. ಕೈಯಲ್ಲಿ ಧ್ವಜದ ಹಗ್ಗ ಸಡಿಲವಾಗಿತ್ತು. ಮೈಯೂ, ಮಂಚವೂ ಪೂರಾ ರಕ್ತಮಯ!

ಆ ಭವನವನ್ನು ನಿರ್ಮಿಸಿದ ಶಿಲ್ಪಿ ಏಳನೇ ಮಾಳಿಗೆಯಲ್ಲಿ ಆ ವಿಗ್ರಹವನ್ನು ನಿಲ್ಲಿಸಿ, ಅದರ ಮೇಲೆ ಧ್ವಜವನ್ನಿಟ್ಟಿದ್ದನು. ವರಾಹವು ಆ ರಾಜ್ಯದ ಲಾಂಛನವಾಗಿತ್ತು. ರಾಜಕುಮಾರನು ಆಡುತ್ತಾ ಧ್ವಜದ ಹಗ್ಗವನ್ನೆಳೆದಾಗ, ವಿಗ್ರಹವು ರಾಜಕುಮಾರನ ಮೇಲೆ ಬಿದ್ದು ಅವನನ್ನು ಕೊಂದುಹಾಕಿತು.

"ಹಾ! ವಿಧಿಲಿಖಿತವೇ!" ಎಂದು ಎಲ್ಲರೂ ಗೋಳಿಟ್ಟರು.

ದುಃಖದಲ್ಲಿ ಮುಳುಗಿದ ರಾಜನು ಮಿಹಿರನನ್ನು ಅಪ್ಪಿಕೊಂಡು ಎಷ್ಟೋ ಗೌರವಿಸಿದನು. ಅವನ ವಿದ್ವತ್ತಿಗೆ ಮೆಚ್ಚಿದ ರಾಜನು ಅವನನ್ನು ಜ್ಯೋತಿಷ ಚಕ್ರವರ್ತಿ ಎಂದು ಕೊಂಡಾಡಿದನು. ಅಂದಿನಿಂದ ಮಿಹಿರನಿಗೆ "ವರಾಹ ಮಿಹಿರ" ಎಂದು ಬಿರುದುಂಟಾಯಿತು.



# ತರಕಾರಿಗಳ ಕೋಳಿ



ಕೆ. ಬಿ. ಕುಲಕರ್ಣಿ, ಬಾಗಲಕೋಟೆ

# ಮುಂಬದಿಯ ಚಿತ್ರ

ಕೌರವರಿಗೂ ಪಾಂಡವರಿಗೂ ದ್ರೋಣಾಚಾರ್ಯರು ಗುರುಗಳಾಗಿದ್ದರು. ಅವರು ಸಕಲ ಶಾಸ್ತ್ರಗಳನ್ನೂ ಬಲ್ಲವರು. ಧನುರ್ವೇದದಲ್ಲಿ ಅವರನ್ನು ಮೀರಿಸಿದ ಗುರುಗಳು ಬೇರೆಯಾರೂ ಇರಲಿಲ್ಲ. ಅವರ ಕೀರ್ತಿಯನ್ನುಕೇಳಿ, ವೃಷ್ಣಿ, ಅಂಧಕ ಮೊದಲಾದ ರಾಜಕುಮಾರರು ವಿಧ್ಯಾಭ್ಯಾಸಕ್ಕಾಗಿ ಹಸ್ತಿನಾವತಿಗೆ ಬಂದಿದ್ದರು.

ಅವರ ವಿಧ್ಯಾರ್ಥಿಗಳಲ್ಲಿ ಅರ್ಜುನನೂ ಕರ್ಣನೂ ಬಹಳ ಕುಶಲರಾಗಿದ್ದರು. ಕರ್ಣನು ದುರ್ಯೋಧನನ ಪಕ್ಷಪಾತಿಯಾಗಿ, ಸಮಯ ಸಿಕ್ಕಿದಾಗೆಲ್ಲ ಅರ್ಜುನನ್ನು ಪರಿಹಾಸ ಮಾಡುತ್ತಿದ್ದನು. ಆ ಬಗೆಯ ಗುಣಗಳು ಅರ್ಜುನನಿಗಿಲ್ಲದ್ದರಿಂದ, ಆಚಾರ್ಯರಿಗೆ ಅರ್ಜುನನೇ ಪ್ರಿಯ ಶಿಷ್ಯನಾಗಿದ್ದನು. ಅರ್ಜುನನಷ್ಟು ಗುರುಮನೋನುವರ್ತಿಯಾದ ವಿಧ್ಯಾರ್ಥಿ ಬೇರೆಯಾರೂ ಇರಲಿಲ್ಲ. ಗುರು ಏರ್ಪಡಿಸಿದ ವಿದ್ಯಾಸ್ಪರ್ಧೆಗಳಲ್ಲೆಲ್ಲಾ ಅರ್ಜುನನೇ ಗೆಲ್ಲುತ್ತಿದ್ದನು. ಇದರಿಂದ ದ್ರೋಣಾಚಾರ್ಯರ ಮಗನಾದ ಅಶ್ವತ್ಥಾಮನಿಗೆ ಕೂಡಾ ಅರ್ಜುನನ ಮೇಲೆ ಮಾತ್ಸರ್ಯ ಉಂಟಾಯಿತು.

ಈ ಮಾತ್ಸರ್ಯದಿಂದ ಅಶ್ವತ್ಥಾಮನು, ಕತ್ತಲೆಯಲ್ಲಿ ಬಾಣಬಿಡುವ ವಿದ್ಯೆಯನ್ನು ಅರ್ಜುನನು ಕಲಿಯಬಾರದೆಂದು ಬಗೆದನು. ಅದಕ್ಕಾಗಿ ಅರ್ಜುನನು ಕತ್ತಲೆಯಲ್ಲಿ ಊಟ ಮಾಡದಂತೆ ನೋಡಿಕೊಳ್ಳುತ್ತಿರಬೇಕೆಂದು ಅಡಿಗೆಯವನಿಗೆ ಗುಟ್ಟಾಗಿ ಹೇಳಿದ್ದನು.

ಒಂದುದಿನ ರಾತ್ರಿ ಅರ್ಜುನನು ಊಟ ಮಾಡುವಾಗ ಆಕಸ್ಮಿಕವಾಗಿ ಗಾಳಿಬಂದು ದೀಪ ವಾರಿತು. ಕತ್ತಲೆಯಲ್ಲಿ ಅರ್ಜುನನು ಊಟ ಮಾಡುತ್ತಲೇ ಇದ್ದನು. ಕತ್ತಲೆಯಲ್ಲಿ ಕೈ ಬಾಯಿಯ ಗುರಿ ತಪ್ಪದಿರುವುದನ್ನು ನೋಡಿ, ಹೀಗೆಯೇ ಕತ್ತಲೆಯಲ್ಲಿ ಅಭ್ಯಾಸ ಮಾಡಿದರೆ ಶರಸಂಧಾನದ ಗುರಿಯೂ ಸಾಧಿಸುವುದೆಂಬ ಯೋಚನೆ ಬಂತು.

ಅಂದಿನಿಂದ ಅರ್ಜುನನು ರಾತ್ರಿಯಲ್ಲಿ ಬಿಲ್ಲು ವಿದ್ಯೆಯನ್ನು ಅಭ್ಯಾಸ ಮಾಡುತ್ತಾ ಗುರಿ ಹೊಡೆಯಲು ಸಾಧಿಸ ತೊಡಗಿದನು.

ನಿಃಶಬ್ದ ರಾತ್ರಿಯಲ್ಲಿ ಅವನ ಧನುಷ್ಟಂಕಾರ ಧ್ವನಿಯನ್ನು ಕೇಳಿ, ಮನೆಯೊಳಗೆ ಮಲಗಿದ್ದ ದ್ರೋಣಾಚಾರ್ಯರು ಎದ್ದು ಹೊರಗೆ ಬಂದರು. ಪ್ರಿಯ ಶಿಷ್ಯನ ಆಸಕ್ತಿಯನ್ನು ಕಂಡು ಅವರಿಗೆ ಆಶ್ಚರ್ಯವೂ ಆನಂದವೂ ಉಂಟಾಯಿತು. ಅರ್ಜುನನ್ನು ಆಲಿಂಗಿಸಿಕೊಂಡು, “ಅರ್ಜುನಾ! ನಿನಗೆ ಸರಿಯಾದ ಬಿಲ್ಲುಗಾರ ಬೇರೊಬ್ಬನಿಲ್ಲವೆಂಬಂತೆ, ನಿನಗೆ ಈ ವಿದ್ಯೆಯಲ್ಲಿ ಎಲ್ಲಾ ರಹಸ್ಯಗಳನ್ನೂ ಹೇಳಿಕೊಡುತ್ತೇನೆ” ಎಂದರು.

ಹೀಗೆ ಅರ್ಜುನನು ಗುರುವಿನ ಮೆಚ್ಚುಗೆಗೆ ಪಾತ್ರನಾಗಿ, ಚತುರಂಗಬಲದ ಯುದ್ಧ ವಿದ್ಯೆಗಳಲ್ಲಿ ಪ್ರವೀಣತೆಯನ್ನು ಪಡೆದನು.




**ಪೂ**ರ್ವದಲ್ಲಿ ಸುರೇಖಾ ಎಂಬ ದೇಶವು ಪ್ರಸಿದ್ಧವಾಗಿತ್ತು. ಚಕ್ರಧರನೆಂಬ ದೊರೆಯು ಅದನ್ನು ಆಳಿಕೊಂಡಿದ್ದನು. ಅವನು ವಾಸ ಮಾಡುತ್ತಿದ್ದ ಅರಮನೆ ಏಳು ತಲೆಗಳ ಪೂರ್ವದಲ್ಲಿ ನಿರ್ಮಿಸಲ್ಪಟ್ಟಿತ್ತು. ಅಂದಿನಿಂದ ಈ ವರೆಗೂ ಅದಕ್ಕೊಂದು ಜೀರ್ಣೋದ್ಧಾರ ಎಂಬ ಮಾತೇ ಇರಲಿಲ್ಲ.

ಆದುದರಿಂದ ಬರುಬರುತ್ತಾ ಆ ಅರಮನೆ ತುಂಬ ಶಿಥಿಲವಾಗಿ ಹೋಗಿತ್ತು ನೋಡುವುದಕ್ಕೂ ಅಸಹ್ಯವಾಗುವಷ್ಟು ಹಳೆಯದಾಗಿ ಹೋಗಿತ್ತು. ಈಗ ಅದನ್ನು ಸರಿ ಪಡಿಸುವುದೆಂದರೆ ಆಗುವ ಕೆಲಸವಲ್ಲವೆಂದು ರಾಜನು ಉಪೇಕ್ಷೆಯಾಗಿದ್ದನು. ಹಾಗೆಂದು ಅಲ್ಲಿ ವಾಸ ಮಾಡಲಿಕ್ಕೂ ಅವನಿಗೆ ಇಷ್ಟವಿರಲಿಲ್ಲ. ಏನು ಮಾಡುವುದು? ಆ ಮುದಿ ಅರಮನೆಯಲ್ಲಿ ಇನ್ನೊಂದು ಕ್ಷಣವೂ ಇರದಂತೆ ಎಲ್ಲಿಯಾದರೂ ಒಳ್ಳೇ ಆಹ್ಲಾದಕರವಾದ ಸ್ಥಳವನ್ನು ನೋಡಿಕೊಂಡು ನಿವಾಸವನ್ನೇರ್ಪಡಿಸಿಕೊಳ್ಳಬೇಕೆಂದು ದೊರೆ ನಿಶ್ಚಯಿಸಿದನು.

ನಿಶ್ಚಯಿಸಿಕೊಂಡದ್ದೇ ತಡ, ತನ್ನ ಪರಿವಾರಗಳನ್ನೆಲ್ಲಾ ಹೊರಡಿಸಿಕೊಂಡು ಅಲ್ಲಿಂದ ಹೊರಟನು. ಉತ್ತಮವಾದ ಸ್ಥಳವನ್ನು ಹುಡುಕುತ್ತಾ ಹೋಗಿ ಹೋಗಿ ಒಂದು ನದೀ ತೀರವನ್ನು ಸೇರಿದನು.

ಆ ನದೀ ತೀರದಲ್ಲಿ ಅವನು ಹೊಂದಿದ ಆನಂದವನ್ನು ಬಣ್ಣಿಸಲು ಸಾಧ್ಯವಿಲ್ಲ. ಅಲ್ಲಿಯ ಸುಖಕರವಾದ ಗಾಳಿಯನ್ನೂ ದೃಶ್ಯಗಳನ್ನೂ ನೋಡುತ್ತಲೇ, ಅವನ ಶರೀರವೂ, ಮನಸ್ಸೂ ಆಹ್ಲಾದದಿಂದ ಉತ್ತೇಜಿತವಾಯಿತು. ಆ ನದೀ ತೀರದ ವಿಶಾಲಪ್ರದೇಶದಲ್ಲಿಯೇ, ಒಂದು ಹೊಸ ಅರಮನೆಯನ್ನು ನಿರ್ಮಿಸಬೇಕೆಂದು ಸಂಕಲ್ಪಿಸಿದನು. ಬಳಿಕ ಆ ಪ್ರದೇಶದ ಸ್ಥಿತಿಗತಿಗಳನ್ನು ವಿಚಾರಿಸಿಕೊಂಡು ಬರುವಂತೆ, ಭಟರಿಗೆ ಅಪ್ಪಣೆ ಮಾಡಿದನು

ಅಲ್ಲಿಗೆ ಸಮೀಪದಲ್ಲಿ ಗುಂಪಾಗಿ ಬೆಳೆದಿರುವ ಮರಗಳ ಸಂದಿನಿಂದ ಒಂದು ಸಣ್ಣ ಮನೆ ಇರುವಂತೆ ತೋರಿತು. ರಾಜನು ತನ್ನ ಪರಿ

ಜಿ. ವೆಂಕಟ್ರಾಮು, ಮದರಾಸು



ವಾರದೊಂದಿಗೆ ಅಲ್ಲಿಗೆ ಹೋಗಿ ನೋಡಲಾಗಿ ಅದೊಂದು ಚಿಕ್ಕ ಗುಡಿಸಲು.

ಅಲ್ಲಿ ತೊಂಭತ್ತು ವರ್ಷ ವಯಸ್ಸಿನ ಮುದುಕಿ ಯೊಬ್ಬಳಿದ್ದಳು. ತನ್ನ ಗುಡಿಸಲಿನ ಬಳಿಗೆ ಬಂದ ಜನರು ರಾಜನೂ, ಅವನ ಪರಿವಾರ ದವರೂ ಎಂದು ಅವಳಿಗೆ ತಿಳಿಯಿತು. ಅವಳು ಬಹಳ ಸಂತೋಷ ಪಟ್ಟು ಅವರನ್ನೆಲ್ಲಾ ಮರ್ಯಾದೆಯಿಂದ ಮಾತನಾಡಿಸಿ "ಅಯ್ಯಾ, ನೀವೆಲ್ಲಾ ಇಲ್ಲಿಗೆ ಏಕೆ ಬಂದಿರಿ?" ಎಂದು ಕೇಳಿದಳು.

ಆಗ ಮಂತ್ರಿ ಅವಳನ್ನು ಕುರಿತು—"ಅವ್ವ, ಇಲ್ಲಿ ನಮ್ಮ ಪ್ರಭುಗಳಿಗೆ ಬಹಳ ಸುಖವಾಗಿದೆ ಎಂದು ಅಪ್ಪಣೆ ಕೊಡುತ್ತಾರೆ. ಅರಮನೆ ಯನ್ನು ನಿರ್ಮಿಸುವುದಕ್ಕೆ ಇಲ್ಲಿ ವಿಶಾಲವಾದ ಸ್ಥಳವಿದೆ. ಆದರೆ ಇಲ್ಲಿರುವ ನಿನ್ನ ಗುಡಿಸ ಲನ್ನು ತೆಗೆದು ಹಾಕಬೇಕಾಗುತ್ತದೆ" ಎಂದನು.

ಅದಕ್ಕೆ ಮುದುಕಿ—"ಅಯ್ಯೋ ನನ್ನಪ್ಪ ನಮ್ಮನ್ನಾಳುವ ಮಹಾ ಪ್ರಭುಗಳು ಅರಮನೆ ಕಟ್ಟಿಕೊಳ್ಳೋದಕ್ಕೆ ನಾನು ಬೇಡಾಂದೇನಾ? ಅದಕ್ಕಿಂತ ಬೇಕಾದ್ದು ನನಗೇನಿದೆ? ಆದರೆ ಈ ಗುಡಿಸಿಲು ನನ್ನ ಏಳು ತಲೆ ಮಾರಿನ ಕೆಳಗೆ ನನ್ನ ಪೂರ್ವಿಕರು ಕಟ್ಟಿದ್ದು. ಈಗ ನನ್ನ ಕಾಲದಲ್ಲಿ ಬಲಗುಂದಿ ಮುದುಕಿಯಾಗಿರು ವುದರಿಂದ, ದುಡ್ಡು ಹಾಕಿ, ಇದನ್ನು ದುರಸ್ತಿ ಮಾಡಲಿಕ್ಕೆ ಆಗಲಿಲ್ಲ. ಹೋದರೆ ಹೋಗಲಿ, ನಾನು ಮಾತ್ರ ಈ ಹುಲ್ಲು ಗುಡಿಸಲು ಬಿಟ್ಟು ಹೋಗಲಾರೆ. ಎಂದಾದರೂ ಸಾಧ್ಯವಾದರೆ ದುರಸ್ತಿ ಮಾಡಿಸಿಕೊಂಡೇನು, ಇಲ್ಲದಿದ್ದರೆ ಇಲ್ಲ. ಆದರೆ ಈ ಜಾಗು ಮಾತ್ರ ಬಿಟ್ಟು ನಾನು ಹೋಗಲಾರೆನಯ್ಯ" ಎಂದಳು.

ಮಂತ್ರಿ ಮತ್ತೆ ಆ ಮುದುಕಿಯನ್ನು ಕುರಿತು—"ಮುದುಕಿ, ನೀನು ಹೇಳುವು ದೆಲ್ಲಾ ಚೆನ್ನಾಗಿಯೇ ಇದೆ. ಆದರೆ ಹುಚ್ಚು ಹುಚ್ಚು ಊಹೆಗಳನ್ನು ಇಟ್ಟುಕೊಂಡು ಮುದಿ ಭ್ರಾಂತಿಯಿಂದ ಏನೇನೋ ಹೇಳುತ್ತಿ. ನೀನು ಇಲ್ಲಿಂದ ಕದಲಲಾರೆ ಅಂದರೆ ಆದೀತೆ? ಹಾಗೆ ಹೇಳುವುದು ಬರೀಮೂರ್ಖತೆಯೆ ಹೊರತು ಮತ್ತೇನಲ್ಲ. ನೀನು ಈ ಜಾಗನ್ನು ಬಿಟ್ಟು ಕೊಟ್ಟೇ ಅಂದರೆ, ದೊರೆಗಳು ಅವರ ವಿಸ್ತಾರ ವಾದ ರಾಜ್ಯದಲ್ಲಿ ನಿನಗೆ ಬೇಕಾದಷ್ಟು ಜಾಗೆ ಯನ್ನೋ ಮನೆಯನ್ನೋ ಕೊಡುತ್ತಾರೆ.

ಅಥವಾ ನೀನು ಕೇಳುವಷ್ಟು ಹಣವನ್ನಾದರೂ ಕೊಡುತ್ತಾರೆ" ಎಂದನು.

ಅದಕ್ಕೆ ಆ ಮುದುಕಿ—"ಅಯ್ಯಾ, ನಿಮ್ಮ ದೊಡ್ಡ ದೊಡ್ಡ ಜಾಗೆಗಳೂ ನನಗೆ ಬೇಡ. ಹಣದ ರಾಶಿಗಳೂ ನನಗೆ ಬೇಡ. ಏನು ಬಂದರೂ ಏನು ಹೋದರೂ ನಾನು ಈ ಗುಡಿಸಲನ್ನು ಬಿಟ್ಟು ಮಾತ್ರ ಕದಲಲಾರೆ. ದೊರೆಗಳಿಗೆ ಬೇಕಾದರೆ ನಾನೇನೂ ಬೇಡ ಎನ್ನಲಾರೆ. ನನ್ನ ಈ ಮುರುಕು ಗುಡಿಸಲಿನ ತಂಟೆಗೆ ಬಾರದೆ ಈ ವಿಶಾಲ ಪ್ರದೇಶದಲ್ಲಿ ಎಲ್ಲಿಯಾದರೂ ಅರಮನೆ ಕಟ್ಟಿಸಿಕೊಳ್ಳಬಹುದಲ್ಲಾ?" ಎಂದಳು ನಿರ್ಭಯದಿಂದ.

ಇದನ್ನು ಕೇಳಿ ರಾಜಪರಿವಾರದವರೆಲ್ಲಾ ಆ ಮುದುಕಿಯನ್ನು ಕೋಪದಿಂದ ನೋಡಿದರು. "ಯಾರೊಡನೆ ಮಾತಾಡುವುದೆಂಬ ಜ್ಞಾನಕೂಡಾ ಈ ಮುದುಕಿಗೆ ಇಲ್ಲವಲ್ಲಾ? ಇವಳ ದರಿದ್ರ ಬದುಕೆಷ್ಟು? ಈ ಮುರುಕು ಗುಡಿಸಲೆಷ್ಟು? ಎಳೆದು ಕೆಡವಿರಿ ಈ ಗುಡಿಸಲನ್ನು!" ಎಂದು ಮಂತ್ರಿ ಕೋಪದಿಂದ ಉರಿದು ಬಿದ್ದನು.

ಬಳಿಯಲ್ಲಿಯೇ ಇದ್ದು ಇದನ್ನೆಲ್ಲಾ ಕೇಳುತ್ತಿದ್ದ ರಾಜನು, ಮಂತ್ರಿಯನ್ನು ಶಾಂತಪಡಿಸಿದನು. ಮುದುಕಿ ಹೇಳಿದ ಮಾತನ್ನು ಸರಿಯಾಗಿ ಕೇಳಿ, ಚೆನ್ನಾಗಿ ಅರ್ಥ ಮಾಡಿಕೊಂಡವನು ಚಕ್ರಧರ ಮಹಾರಾಜನೊಬ್ಬನೇ. ಮುದುಕಿಯ ಮಾತುಗಳನ್ನು ಕೇಳುತ್ತಿದ್ದಂತೆ ಆ ದೊರೆಯ ಹೃದಯದಲ್ಲಿ ದೊಡ್ಡ ಸಂಚಲನೆಯುಂಟಾಗಿತ್ತು.



ಆ ಮುದುಕಿಗೆ ತನ್ನ ಜನ್ಮಸ್ಥಳದ ಮೇಲಿರುವ ಅಭಿಮಾನಕ್ಕೂ, ಅವಳು ತನ್ನ ಪೂರ್ವಿಕರಮೇಲೆ ಇಟ್ಟಿರುವ ಭಕ್ತಿಶ್ರದ್ಧೆಗಳಿಗೂ ರಾಜನು ಅಚ್ಚರಿ ಪಡುತ್ತಾ ಮೆಚ್ಚಿಕೊಂಡನು. ಈ ಮಾತುಗಳನ್ನು ಕೇಳಿದ ಮೇಲೆ, ತಾನು ಯೋಚನೆ ಮಾಡಿದ್ದೆಲ್ಲಾ ಬಹಳ ತಪ್ಪೆಂದು ಆ ದೊರೆಗೆ ತೋರಿತು. "ಪ್ರಜೆಗಳ ಹಿತಚಿಂತಕನೂ, ಊರಾಳುವ ದೊರೆಯೂ ಆದ ನನಗೆ ಈ ಹಣ್ಣು ಹಣ್ಣು ಮುದುಕಿಗಿರುವ ಯೋಚನೆ ಕೂಡಾ ಇಲ್ಲದೆ ಹೋಯಿತಲ್ಲಾ' ಎಂದು ಎಷ್ಟೋ ವಿಚಾರಪಟ್ಟನು.

ಚಕ್ರಧರನು ಮಂತ್ರಿ ಮುಂತಾದವರನ್ನು ಕರೆದು—"ಈ ಅವ್ವ ನನಗೆ ಒಂದು ಉತ್ತಮವಾದ ಪಾಠವನ್ನು ಕಲಿಸಿದ್ದಾಳೆ. ನಾನು ನನ್ನ ಅರಮನೆಯನ್ನು ದುರಸ್ತೀ ಮಾಡಿಸಿ, ನನ್ನ

ಪೂರ್ವಿಕರ ಗೌರವವನ್ನು ಕಾಪಾಡಿಕೊಳ್ಳು ವುದು ನನ್ನ ಕರ್ತವ್ಯ. ಇಷ್ಟುಕಾಲ ನಾನು ನನ್ನ ಕರ್ತವ್ಯವನ್ನು ಮರೆತುಬಿಟ್ಟೆ. ಅದೃಷ್ಟವಶಾತ್ತಾಗಿ ನಾವು ಇಲ್ಲಿಗೆ ಬರುವಂತಾದುದರಿಂದ, ಈ ಅವ್ವ ನನಗೆ ನನ್ನ ಕರ್ತವ್ಯವನ್ನು ಜ್ಞಾಪಕ ಪಡಿಸಿದಳು. ಇನ್ನು ನಾನು ನನ್ನ ರಾಜಭವನವನ್ನು ಜೀರ್ಣೋದ್ಧಾರ ಮಾಡಿಸಬೇಕು. ಅದು ವರೆಗೆ ಇಲ್ಲಿಯೇ ವಾಸಮಾಡಿಕೊಂಡಿರುವೆನು. ನನ್ನ ಪೂರ್ವಿಕರು ಕಟ್ಟಿದ ಆ ಅರಮನೆಯನ್ನು ಸರ್ವಾಂಗ ಸುಂದರವಾಗಿ ಮಾಡಿಕೊಂಡು, ಮತ್ತೆ ಅದರಲ್ಲಿ ಪ್ರವೇಶಿಸುವೆನು." ಎಂದು ತನ್ನ ನಿಶ್ಚಯವನ್ನು ಪ್ರಕಟ ಮಾಡಿದನು.

ರಾಜ ಪರಿವಾರದಲ್ಲಿ ಕೆಲವರಷ್ಟೇ ರಾಜನ ಮಾತನ್ನು ಗ್ರಹಿಸಿ ಅರ್ಥ ಮಾಡಿಕೊಂಡರು. ಉಳಿದವರು "ಈ ಮುದುಕಿ ಅರಸನಿಗೇನೋ ಹುಚ್ಚು ಹಿಡಿಸಿದಳು" ಅಂದುಕೊಂಡರು. ಚಕ್ರಧರ ರಾಜನು ಆ ನದೀ ತೀರದಲ್ಲಿಯೇ ತನ್ನ ನಿವಾಸವನ್ನು ಏರ್ಪಡಿಸಿಕೊಂಡು ತನ್ನ ನಿಶ್ಚಯವನ್ನು ಕಾರ್ಯರೂಪಕ್ಕೆ ಇಳಿಸ ತೊಡಗಿದನು.

ರಾಜನು ಅಲ್ಲಿ ಬಂದು ವಾಸ ಮಾಡಿದುದರಿಂದ ಪಟ್ಟಣದ ಮುಖ್ಯಮುಖ್ಯ ವ್ಯಕ್ತಿಗಳೂ ಅಲ್ಲಿಗೇ ಬಂದು ನಿವಾಸವನ್ನು ಏರ್ಪಡಿಸಿಕೊಂಡರು. ಅದೂ ಒಂದು ಪಟ್ಟಣದಂತೆಯೇ ತಯಾರಾಯಿತು. ಆದರೆ ಅದು ನಗರ ಲಕ್ಷಣದಂತೆ ಕಾಣುವ ಪಟ್ಟಣವಲ್ಲ, ಹಳ್ಳಿಯ ಲಕ್ಷಣದಂತೆ ಕಾಣುವ ಪಟ್ಟಣ.

ಕೆಲವು ವರ್ಷಗಳು ಕಳೆದುವು. ರಾಜಭವನದ ಜೀರ್ಣೋದ್ಧಾರವು ಮುಗಿಯಿತು. ಈಗ ಅದು ಹೊಸ ಕಳೆಯಿಂದ ಶೋಭಿಸ ತೊಡಗಿತು. ಹೊಸ ಕಟ್ಟಡಗಳು ಎಷ್ಟೇ ಎದ್ದರೂ ಮುದುಕಿಯ ಮುರುಕು ಗುಡಿಸಲಿಗೆ ಮಾತ್ರ ಏನೂ ಬಾಧೆ ಬರಲಿಲ್ಲ. ಯಾರೂ ಅದರ ತಂಟೆಗೆ ಹೋಗಬಾರದೆಂದು ರಾಜನ ಕಟ್ಟಾಜ್ಞೆ.

ಆದರೆ ರಾಜನು ತನ್ನ ಹೃದಯದಲ್ಲಿ ತುಂಬಿದ ಕೃತಜ್ಞತೆಯನ್ನು ವ್ಯಕ್ತಪಡಿಸಲಿಕ್ಕೆ ಆ ಮುದುಕಿಯನ್ನು ಒಪ್ಪಿಸಿ, ಅವಳ ಗುಡಿಸಲನ್ನು ಕೂಡಾ ದುರಸ್ತೀ ಮಾಡಿಸಿದನು. ಮತ್ತು ಆ ಪ್ರದೇಶದಲ್ಲಿ ಏರ್ಪಟ್ಟ ಆ ನಗರಕ್ಕೆ "ಅವ್ವಾಪುರ" ಎಂಬ ಹೆಸರನ್ನಿಟ್ಟನು.

ಇಷ್ಟೇ ಅಲ್ಲದೆ, ದೊರೆ ಆ ಸುರೇಖಾ ರಾಜ್ಯದಲ್ಲಿ ಪೂರ್ವಿಕರ ಶಿಥಿಲ ಭವನಗಳನ್ನೆಲ್ಲಾ ದುರಸ್ತಿ ಮಾಡಿಸಲು ಏರ್ಪಾಡು ಮಾಡಿದನು.






ಹಂಸದ್ವೀಪವೂ ಕ್ರೌಂಚದ್ವೀಪವೂ ನೆರೆಕರೆಗಳು. ಕ್ರೌಂಚದ್ವೀಪದ ರಾಜನಿಗೆ ಎಲ್ಲಾ ದೇಶದ ರಾಜರೂ ಮಿತ್ರರಾಗಿದ್ದರು. ಆದರೆ ಹಂಸದ್ವೀಪದ ರಾಜನು ಮಾತ್ರ ಸ್ನೇಹಕ್ಕೆ ಒಪ್ಪದೆ ಬೀಗಿಕೊಂಡಿದ್ದನು. ಅವನನ್ನು ಹೇಗೆ ತನ್ನ ಕಡೆಗೆ ಬಾಗಿಸುವುದೋ ಎಂದು ಕ್ರೌಂಚ ದ್ವೀಪದ ಅರಸನು ಯೋಚಿಸುತ್ತಿದ್ದನು.

ಅಹಿಂಸಾ ಮಾರ್ಗದಿಂದಲೇ ಆ ಕೆಲಸ ವಾಗಬೇಕು. ದೂರದರ್ಶಿ ಎಂಬ ಚಾಣಾಕ್ಷ ಮಂತ್ರಿ, ತಾನು ಆ ಕೆಲಸವನ್ನು ಸಾಧಿಸುವೆನೆಂದು ಭರವಸೆ ಕೊಟ್ಟು, ಹಂಸದ್ವೀಪಕ್ಕೆ ರಾಯಭಾರಿಯಾಗಿ ಹೊರಟನು.

ಹಂಸದ್ವೀಪದ ಅರಸನಿಗೆ ತಾನು ಬಹಳ ಬುದ್ಧಿವಂತನೆಂಬ ಗರ್ವವು ತಲೆಗೆ ಹತ್ತಿತ್ತು. ರಾಯಭಾರಿಯಾಗಿ ಬಂದ ದೂರದರ್ಶಿಯನ್ನು ಅಲ್ಲಿಂದಲ್ಲೇ ಅವಮಾನಗೊಳಿಸಿ ಹಿಂದಿರುಗಿಸಬೇಕೆಂದು ಎಣಿಕೆ ಹಾಕಿದನು.

ದೂರದರ್ಶಿ ಕೋಟೆಯ ದ್ವಾರದ ಬಳಿಗೆ ಬರುತ್ತಲೇ ಭಟರು ಗಬಗಬನೆ ದ್ವಾರವನ್ನು ಮುಚ್ಚಿಬಿಟ್ಟರು. ದೊರೆ ಕೋಟೆಯ ಕೊತ್ತಳದ ಮೇಲೆ ಸಿಂಹಾಸನದಲ್ಲಿ ಕುಳಿತುಕೊಂಡು ನೋಡುತ್ತಲೇ ಇದ್ದ.

ದೊರೆಯನ್ನು ನೋಡುತ್ತಲೇ ದೂರದರ್ಶಿ ಕೆಳಗಿನಿಂದಲೇ ವಂದನೆಯನ್ನು ಸಮರ್ಪಿಸಿದನು. ದೊರೆ ಎಗತಾಳಿಯಾಗಿ ನಗುತ್ತಾ—"ಏಯ್, ಕ್ರೌಂಚಮಂತ್ರಿ, ಅಕೋ ಆ ದೊಡ್ಡ ಬಾಗಿಲ ಪಕ್ಕದಲ್ಲಿ ನಾಯಿಗಳು ಪ್ರವೇಶಿಸುವ ಸಣ್ಣ ದ್ವಾರವಿದೆ. ಅದರಲ್ಲಿ ಹೊಕ್ಕು ಇಲ್ಲಿ ಬಾ." ಎಂದನು ಸಿಂಹಾನದಲ್ಲಿ ಕುಳಿತುಕೊಂಡೇ. ಸುತ್ತುಮುತ್ತಿನವರು "ಭಲೇ, ಭಲೆ!" ಎಂದು ನಕ್ಕರು.

ಆಗ ದೂರದರ್ಶಿ—"ಚಿತ್ತಮಹಾ ಪ್ರಭು, ಇದು ಯಾರಿಗೆ ಸಂಬಂಧಿಸಿದ ದೇಶವೋ ಅವರು ಹೋಗುವ ದ್ವಾರದಲ್ಲೇ ಹೋಗುತ್ತೇವೆ. ಮನುಷ್ಯರ ದೇಶವಾದರೆ ಮನುಷ್ಯರ ದ್ವಾರದಲ್ಲಿಯೂ, ನಾಯಿಗಳ ದೇಶವಾದರೆ ಅವುಗಳ ದ್ವಾರದಲ್ಲಿಯೂ ಹೋಗಲೇಬೇಕಲ್ಲ ಮತ್ತೆ?" ಎಂದಾಗ, ದೊರೆಯ ಮುಖ ಕಹಿ ತಿಂದ ಹಾಗಾಯಿತು. ಬೇರೇನೂ ಉಪಾಯವಿಲ್ಲದೆ ರಾಜನು ಅವನನ್ನು

ಎಚ್. ಎಂ. ರಾಮು, ಶಿವಮೊಗ್ಗಾ

ಸಿಂಹದ್ವಾರದಿಂದಲೇ ಕರೆಸಿಕೊಂಡು ತನ್ನ ಪಕ್ಕದಲ್ಲಿ ಕುರ್ಚಿ ಹಾಕಿಸಿ ಕುಳ್ಳಿರಿಸಿಕೊಂಡನು.

ನೋಟಕ್ಕೆ ದೂರದರ್ಶಿ ತುಂಬಾ ಗಿಡ್ಡ. ಕುರ್ಚಿಯಲ್ಲಿ ಅರ್ಧಕ್ಕೂ ಬರಲಿಲ್ಲ. ಆಗ ರಾಜನು ಮತ್ತೆ ಅವಮಾನಿಸಬೇಕೆಂದು—"ಏನಯ್ಯಾ ಮಂತ್ರಿ, ನಿಮ್ಮ ಬುದ್ಧಿಯಂತೆ ನಿಮ್ಮ ದೇಶದ ಜನರೆಲ್ಲಾ ಗಿಡ್ಡರೇನು?" ಎಂದ.

ಕೂಡಲೇ ಮಂತ್ರಿ—"ದೊರೆಯೆ, ನಮ್ಮ ದೇಶದಲ್ಲಿ ಬಗೆಬಗೆಯ ಜನರಿದ್ದಾರೆ. ಅಲ್ಲದೆ ಇನ್ನೊಂದು ನಿಯಮವೂ ಉಂಟು; ಅಲ್ಪರ ಬಳಿಗೆ ಗಿಡ್ಡರನ್ನೂ, ದೊಡ್ಡವರ ಬಳಿಗೆ ದೊಡ್ಡವರನ್ನೂ ಕಳುಹಿಸುವುದು ನಮ್ಮ ದೇಶಾಚಾರ. ಅಂತೆಯೇ ನಿಮ್ಮೆಡೆಗೆ ನನ್ನನ್ನು ಕಳಿಸಿದ್ದಾರೆ"

ಇದನ್ನು ಕೇಳಿ ದೊರೆಯ ಮುಖಕ್ಕೆ ಕಾಸಿಟ್ಟ ಹಾಗಾಯಿತು. ಆದರೂ ಇವನನ್ನು ಹೇಗೆ ಬಾಗಿಸುವುದೆಂದು ಇನ್ನೂ ಯೋಚನೆ ಮಾಡಿದ. ಆಗ ರಾಜಭಟರು ಒಬ್ಬ ಖೈದಿಯನ್ನು ಎಳೆದುಕೊಂಡು ಅಲ್ಲಿಗೆ ಬಂದರು. "ಇವನು ಕ್ರೌಂಚ ದ್ವೀಪದವನು. ನಮ್ಮ ದೇಶಕ್ಕೆ ಬಂದು ಕಳುವು ಮಾಡಿದ" ಎಂದು ಅವನ ಮೇಲೆ ದೂರು ಹೇರಲ್ಪಟ್ಟಿತ್ತು. "ಏನಯ್ಯ ಮಂತ್ರಿ, ನಿಮ್ಮ ರಾಜ್ಯದವರೆಲ್ಲಾ ಕಳ್ಳರೇ ಏನು?" ಎಂದನು ರಾಜ ಅವಹೇಳನೆಯೊಂದಿಗೆ.

ದೂರದರ್ಶಿ ಬಿಟ್ಟುಕೊಡದೆ—"ಹಾಗೇನಿಲ್ಲಿ ಪ್ರಭು. ಅದು ಮಣ್ಣಿನ ಗುಣ. ಯಾವ ಮಣ್ಣಿನ ಮೇಲೆ ಕಾಲಿಟ್ಟರೆ ಆ ಮಣ್ಣಿನ ಗುಣ ಹುಟ್ಟುತ್ತದೆ. ನಿಮ್ಮ ದೇಶಕ್ಕೆ ಕಾಲಿಟ್ಟುದರಿಂದಲೇ ನಮ್ಮವನಿಗೆ ಕಳ್ಳತನದ ಬುದ್ಧಿ ಹುಟ್ಟಿತೇ ಹೊರತು. ನಮ್ಮ ದೇಶದಲ್ಲಿ ಕಳ್ಳತನವೇ ಇಲ್ಲ!" ಎಂದನು.

ಇದನ್ನು ಕೇಳಿ ಆ ರಾಜನು ಪೂರ್ಣವಾಗಿ ಸೋತಂತಾದನು. "ಓ, ಮಹಾ ಮಂತ್ರಿ, ನಿನ್ನ ಬುದ್ಧಿಗೆ ಮೆಚ್ಚಿದೆ. ಏನು ಬಹುಮಾನ ಬೇಕೋ ಕೇಳು" ಎಂದ ನಿರ್ಮಲ ಮನಸ್ಸಿನಿಂದ." "ನಮ್ಮೆರಡು ರಾಜ್ಯಗಳೂ ಸ್ನೇಹವಾಗಿರಬೇಕಾದ್ದೇ ನನ್ನ ಕೋರಿಕೆ" ಎಂದನು ದೂರದರ್ಶಿ. ಅಂದಿನಿಂದ ಎರಡು ರಾಜ್ಯಗಳೂ ಅತ್ಯಂತ ಸ್ನೇಹವಾದುವು.



# ಹಿಂಬದಿಯ ಚಿತ್ರ



ಅನೇಕ ವರ್ಷಗಳ ಹಿಂದೆ ಪ್ರಭಾವಳೀ ಎಂದೊಂದು ದೇಶವಿತ್ತು. ಅಲ್ಲಿ ತೇಜಸೇನನೆಂಬ ದೊರೆ ಆಳುತ್ತಿದ್ದನು. ಅವನಿಗೆ ಮೂವರು ಕುಮಾರರಿದ್ದರು. ಮೂವರೂ ಬುದ್ಧಿವಂತರು, ಸುಂದರರು.

ರಾಜನಿಗೆ ವೃದ್ಧಾಪ್ಯವು ಬಂತು. ತನ್ನನಂತರ ರಾಜ್ಯವನ್ನು ಯಾರಿಗೆ ಒಪ್ಪಿಸುವುದೆಂದು ಆಲೋಚನೆ ಮಾಡಿದನು. ತಂದೆಗೆ ಮೂವರು ಮಕ್ಕಳೂ ಸಮಾನರೇ ಆಗಿರುವಾಗ ಯಾರಿಗೆ ರಾಜ್ಯವನ್ನು ಕೊಡುವುದು?

ಹಿರಿಯವನಾದ ಕಾಂತಿಸೇನನು ಬುದ್ಧಿವಂತನಾದರೂ ಕೊಂಚ ಗರ್ವಿ. ಎರಡನೆಯ ಕಮಲ ಸೇನನು ಹೆಚ್ಚುಕಡಮೆ ಅಣ್ಣನಂತೆಯೇ. ಇವರಿಬ್ಬರೂ ಗರ್ವಿಗಳಾಗಿದ್ದುದರಿಂದ ಪ್ರಜೆಗಳಿಗೆ ಅವರ ಮೇಲೆ ಅಷ್ಟು ಇಷ್ಟವಿರಲಿಲ್ಲ. ಕಡೆಯವನಾದ ಸದಯಸೇನನು ಸುಗುಣಸಂಪನ್ನ; ಪ್ರಿಯ ಭಾಷಿ; ಪ್ರಜೆಗಳೊಂದಿಗೆ ಪ್ರೀತಿಯಿಂದ ಮಾತಾಡುತ್ತಿದ್ದ. ಆದುದರಿಂದ ಪ್ರಜೆಗಳೆಲ್ಲಾ ತಮಗೆ ಸದಯಸೇನನೇ ಪ್ರಭುವಾದರೆ ಒಳ್ಳೆಯದಿದ್ದಿತೆಂದು ಅಂದುಕೊಳ್ಳುತ್ತಿದ್ದರು.

ರಾಜನು ತನ್ನ ಉದ್ದೇಶವನ್ನು ಕುರಿತು ಮಂತ್ರಿಗಳೊಡನೆ ಸಮಾಲೋಚನೆ ಮಾಡಿದನು. ಅವರಿಗೂ ಸರಿಯಾದ ಸಮಾಧಾನ ಹೇಳಲು ತೋರಲಿಲ್ಲ. ಕಡೆಗೆ ಅರಸನಿಗೆ ಒಂದು ಯೋಚನೆ ಹುಟ್ಟಿತು. ಅದೇ ಸರಿಯೆಂದು ನಿಶ್ಚಯ ಮಾಡಿಕೊಂಡು ಮೂವರು ಕುಮಾರರನ್ನೂ ಬಳಿಗೆ ಕರೆದನು. ಮೂರೂ ತಂದೆಯ ಬಳಿಗೆ ಬಂದು ನಿಂತರು.

"ಕುಮಾರರೇ, ನನಗೆ ವೃದ್ಧಾಪ್ಯವು ಬಂದುಬಿಟ್ಟಿತು. ನನ್ನನಂತರ ನಿಮ್ಮ ಮೂವರಲ್ಲಿ ಯಾರೋ ಒಬ್ಬರು ರಾಜ್ಯವಾಳಬೇಕಲ್ಲವೇ? ನೀವು ಮೂವರೂ ನನಗೆ ಸಮಾನರು. ಆದ್ದರಿಂದ ಒಂದು ಉಪಾಯ ಮಾಡಿದ್ದೇನೆ. ಒಂದು ವರ್ಷ ಗಡು ಕೊಟ್ಟಿದ್ದೇನೆ. ನೀವು ಮೂವರೂ ಮೂರು ದಾರಿಯಲ್ಲಿ ಹೊರಟುಹೋಗಿ, ನೋಡಿದರೆ ನಗು ಬರುವ ಸಣ್ಣ ನಾಯಿ ಬೊಂಬೆಯನ್ನು ತರಬೇಕು. ಪ್ರಪಂಚದೊಳಗೆಲ್ಲಾ ಸಣ್ಣ ನಾಯಿ ಬೊಂಬೆಯನ್ನು ಯಾರು ತರುವಿರೋ ಅವರಿಗೇ ಪಟ್ಟಕಟ್ಟುತ್ತೇನೆ, ಅವನೇ ರಾಜ" ಎಂದನು. ಇದಕ್ಕೆ ಮೂವರೂ ಉತ್ಸಾಹದಿಂದ ಸಮ್ಮತಿಸಿದರು. ದೊಡ್ಡವನು ಕಪ್ಪುಕುದುರೆ, ಎರಡನೆಯವನು ಊದಾ ಕುದುರೆ, ಮೂರನೆಯವನು ಬಿಳೀ ಕುದುರೆ, ಇವುಗಳಮೇಲೇರಿಕೊಂಡು ಆ ಮೂವರೂ ಹೊರಟರು.

ಪಟ್ಟಣದ ಹೊರಮೇರೆಯಲ್ಲಿರುವ ದೊಡ್ಡದೊಂದು ಆಲದ ಮರದ ಬುಡಕ್ಕೆ ಒಟ್ಟಿಗೆ ಹೋಗಿ ಸೇರಿದರು. ಗಡುವಿನ ವೇಳೆಗೆ ಎಲ್ಲರೂ ಆ ಮರದ ಬುಡದಲ್ಲೇ ಸೇರಿಕೊಳ್ಳಬೇಕೆಂದು ನಿಶ್ಚಯಿಸಿಕೊಂಡರು. ಅನಂತರ ಆ ಮೂವರು ರಾಜಕುಮಾರರೂ ಮೂರು ದಾರಿಯನ್ನು ಹಿಡಿದು ದೌಡುಬಿಟ್ಟರು.

## ಜಾಣ್ಮೆ - ಉತ್ತರ :

1. ಎಂಟು ನಾಣ್ಯಗಳಲ್ಲಿ ಮೂರನ್ನು ತೆಗೆದು 1 ಎಂಬ ಸಂಖ್ಯೆಯಂತೆ ಒಂದರ ಹಿಂದೊಂದಾಗಿ ನೆಟ್ಟಗೆ ನಿಲ್ಲಿಸಬೇಕು. ಉಳಿದ್ದೈದನ್ನು ಅದರ ಬದಿಯಲ್ಲಿ ಸೊನ್ನೆಯಾಕಾರದಲ್ಲಿ ಮಲಗಿಸಿಡಬೇಕು. ಆಗ ನೋಡಿದರೆ 10.
2. ನೀವೇ ಮಾಡಿನೋಡಿ,
3. ಸ್ಪಂಜ್.
4. ಮೊದಲನೇದು ದಿವಸಕ್ಕೆ ಒಂದು ನಿಮಿಷ ಹಿಂದೆ ಹೋಗುತ್ತದೆ. ಎರಡನೇದು ನಿಂತೇ ಹೋಗಿದೆ.
5. ೬೦ ವರ್ಷಗಳಿಗೊಮ್ಮೆ.

---

### ಕಳೆದ ತಿಂಗಳು ಚಂದಮಾಮಾ ೧೨ ನೇ ಪುಟದ ಚಿತ್ರಗಳ ತಪ್ಪುಗಳು

1. ಹುಬ್ಬುಗಳಿರಬೇಕು.
2. ನಿಮಿಷಗಳ ಗೆರೆ ಇರಬೇಕು.
3. ಸೀಸಕಡ್ಡಿಯ ಗುರುತು ಇನ್ನೊಂದುಬದಿಯಲ್ಲಿ ಕಾಣಬೇಕು.
4. ಫ್ರೇಮಿನಲ್ಲಿ ಸ್ಕ್ರೂ ಇರಬೇಕು.
5. ರೋಜಾದ ಎಲೆಯಾಗಿರಬೇಕು.
6. ನೀರಿನಮಟ್ಟ ಗುಂಡಾಗಿರಬೇಕು.
7. ಬಾಲ ಉದ್ದವಾಗಿ ಕೊನೆಯಲ್ಲಿ ಕುಚ್ಚಿರಬೇಕು.
8. ಇನ್ನೆರಡು ಕಾಲುಗಳಿರಬೇಕು.
9. ಇನ್ನೆರಡು ಕೆಚ್ಚಲಚೊಟ್ಟುಗಳಿರಬೇಕು.

## ಫೋಟೋ ಶೀರ್ಷಿಕೆಯ ಸ್ಪರ್ಧೆ

### ಫಿಬ್ರವರಿ ಫೋಟೋಗಳ ಫಲಿತಾಂಶ

ಫಿಬ್ರವರಿ ತಿಂಗಳ ಚಂದಮಾಮದಲ್ಲಿ ಪ್ರಕಟಿಸುವ ಫೋಟೋಗಳಿಗೆ ನಮಗೆಬಂದ ಶೀರ್ಷಿಕೆಗಳಲ್ಲಿ ಉತ್ತಮವಾಗಿರುವ ಈ ಕೆಳಗಿನ ಶೀರ್ಷಿಕೆಗಳಿಗೆ ಬಹುಮಾನವೆಂದು ನಿರ್ಣಯಿಸಲಾಗಿದೆ.

ಶೀ ರ್ಷಿ ಕೆ :

ಮೊದಲನೇ ಫೋಟೋ :

ನಗಿಸಿ ನಗುವ ಕಂದ

ಎರಡನೇ ಫೋಟೋ :

ನಾದ ಗೀತ ಗೋವಿಂದ

ಕ ಳಿ ಸಿ ದ ವ ರು :

ಕೆ. ಗಿರಿಜ, ಪಿ. ಟಿ. ಮದ್ರಾಸು

ಬಹುಮಾನಪಡೆದ ಈ ಶೀರ್ಷಿಕೆಗಳನ್ನು, ಕಳುಹಿಸಿದವರ ಹೆಸರಿನೊಂದಿಗೆ, ಫಿಬ್ರವರಿ ಚಂದಮಾಮದಲ್ಲಿ ಪ್ರಕಟಿಸುತ್ತೇವೆ. ಬಹುಮಾನದ ಮೊಬಲಗು ರೂ. 10/-ನ್ನು ಫಿಬ್ರವರಿ ಸಂಚಿಕೆ ಹೊರಟಕೂಡಲೇ ಕಳುಹಿಸಲ್ಪಡುತ್ತದೆ.

★

### ಮಾರ್ಚಿ ತಿಂಗಳಲ್ಲಿ

ಪ್ರಕಟಿಸುವ ಫೋಟೋಗಳ ಮಾದರಿಯನ್ನು ವಿವರಗಳೊಂದಿಗೆ ಪಕ್ಕದ ಪುಟದಲ್ಲಿ ನೋಡಿ.

---

### ಮುಖ್ಯ ಸೂಚನೆ :

ನೀವು ಕಳುಹಿಸುವ ಶೀರ್ಷಿಕೆಗಳನ್ನು ಕಾರ್ಡಿನಲ್ಲಿಯೇ ಬರೆದುಕಳಿಸಬೇಕು. ಕೆಲವರು ಕಾಗದದಲ್ಲಿಬರೆದು ಕವರಿನಲ್ಲಿ ಕಳುಹಿಸುತ್ತಾರೆ. ಇಂತಹವುಗಳು ಪರಿಶೀಲಿಸಲ್ಪಡುವುದಿಲ್ಲ.

# ಫೋಟೋ ಶೀರ್ಷಿಕೆಯ ಸ್ಪರ್ಧೆ

ಮಾರ್ಚಿ 1953 : : ಬಹುಮಾನ 10/- ರೂ.





ಮಾರ್ಚಿ ಸಂಚಿಕೆಯಲ್ಲಿ ಬರುವ ಫೋಟೋಗಳು ಮೇಲೆ ಕಾಣಿಸಿರುತ್ತವೆ
ಇವುಗಳಿಗೆ ತಕ್ಕ ಒಂದು ಜತೆ ಶೀರ್ಷಿಕೆ ಬೇಕು.

1. ಶೀರ್ಷಿಕೆಗಳು ಫೋಟೋವಿಗೆ ಸರಿಹೊಂದುವಂತಿರಬೇಕು.
2. ಮುದ್ದಾದ ಒಂದು ಮಾತಾಗಲೀ, ಎರಡು ಮೂರು ಶಬ್ದಗಳ ಒಂದು ವಾಕ್ಯವಾಗಲೀ ಇರಬಹುದು.
3. ಮುಖ್ಯವಾಗಿ ಮೊದಲನೆಯ ಫೋಟೋವಿಗೂ ಎರಡನೆಯ ಫೋಟೋವಿಗೂ, ಒಂದಕ್ಕೊಂದು ಸಂಬಂಧಿಸಿಕೊಂಡಿರುವ ಮಾತುಗಳ ವಾಕ್ಯಗಳಾಗಿರಬೇಕು.
4. ಒಬ್ಬೊಬ್ಬರು ಒಂದೊಂದು ಜತೆ ವಾಕ್ಯಗಳಿಗಿಂತ ಹೆಚ್ಚಿಗೆ ಕಳಿಸಕೂಡದು.
5. ಒಂದು ಕಾರ್ಡಿನಲ್ಲಿ ನೀವು ಕಳುಹಿಸುವ ಶೀರ್ಷಿಕೆಗಳೂ, ನಿಮ್ಮ ಹೆಸರು, ವಿಳಾಸಗಳೂ ಸ್ಪಷ್ಟವಾಗಿರಬೇಕು.
6. ಜನವರಿ 10-ನೇ ತಾರೀಕಿನೊಳಗೆವಾಕ್ಯಗಳು ನಮಗೆ ಬಂದು ಸೇರಬೇಕು. ಅನಂತರ ಬಂದುವುಗಳಿಗೆ ಗಮನಕೊಡಲಾಗುವುದಿಲ್ಲ.
7. ನಮಗೆ ಸೇರಿದ ವಾಕ್ಯಗಳಲ್ಲೆಲ್ಲಾ ಅತ್ಯುತ್ತಮವಾದ ಒಂದು ಜತೆಗೆ (ಅಂದರೆ ಎರಡು ಫೋಟೋ ಶೀರ್ಷಿಕೆಗಳಿಗೂ ಸೇರಿ) ರೂ. 10/- ಬಹುಮಾನವಾಗಿ ಕೊಡಲ್ಪಡುವುದು.
8. ಶೀರ್ಷಿಕೆ ವಾಕ್ಯಗಳನ್ನು ಕಳುಹಿಸಬೇಕಾದ ವಿಳಾಸ:

: ಫೋಟೋ ಶೀರ್ಷಿಕೆಯ ಸ್ಪರ್ಧೆ :

**ಚಂದಮಾಮ ಪಬ್ಲಿಕೇಷನ್ಸ್** ವಡಪಳನಿ ಪೋಸ್ಟ್ :: ಮದರಾಸು - 26.

Printed by B. NAGI REDDI at the B. N. K. Press Ltd., Madras 26 and Published by

Photo by Pranlal K. Patel



ಬಹುಮಾನ
ಪಡೆದ ಶೀರ್ಷಿಕೆ

ಪಸುಳೆಗಳ ಪರಿವಾರಗಳು

ಕಳಿಸಿದವರು:
ಪಿ. ಕೆ. ರಮಾನಂದ, ಉಡುಪಿ

